# ಪುಣ್ಯಕ್ಷೇತ್ರಗಳು : ೯

ಪಂಡಿತ ಕೆ. ಪಿ. ಶಿವಲಿಂಗಯ್ಯ ಎಂ ಎ , ಬಿ ಇಡಿ.,
ಪ್ರಾಂಶುಪಾಲರು, ಮಲ್ಲೇಶ್ವರಂ ಸರ್ಕಾರಿ ಬಾಲಕರ ಕಿರಿಯ ಕಾಲೇಜು ಬೆಂಗಳೂರು.

ಸುತ್ತೂರು:–ಮೈಸೂರು ಜಿಲ್ಲೆಯ ನಂಜನಗೂಡು ತಾಲ್ಲೂಕಿನ ಈ ಗ್ರಾಮವು ಒಂದು ಸಾವಿರ ವರ್ಷಗಳಿಗೂ ಮಿಗಿಲಾದ ಭವ್ಯ ಇತಿಹಾಸವನ್ನು ಹೊಂದಿರುವ ವೀರಶೈವ ಕ್ಷೇತ್ರ. ಇದಕ್ಕೆ 'ಪ್ರದಕ್ಷಿಣಪುರ' ವೆಂಬ (ಸಂಸ್ಕೃತ) ಹೆಸರೂ ಇದೆ. ಈಗುರುಪರಂಪರೆಯ ಸ್ಥಾಪಕರಾದ ಆದಿಜಗದ್ಗುರು ಶ್ರೀ ಶಿವರಾತ್ರೀಶ್ವರ ಭಗವತ್ಪಾದರು ಕಪಿಲಾನದೀದಡದಲ್ಲಿ ತಪಸ್ಸು ಮಾಡುತ್ತಿದ್ದಾಗ, ಕಂಚಿಯ ರಾಜರಾಜ ಚೋಳನ ಕುಮಾರ ರಾಜೇಂದ್ರ ಚೋಳನ ದಿವ್ಯಾಶ್ವವು ತನ್ನ ಒಡೆಯನೊಂದಿಗೇ ಧ್ಯಾನಮಗ್ನರಾಗಿದ್ದ ಗುರುಗಳನ್ನು ಪ್ರದಕ್ಷಿಣಿಮಾಡಿ ನಿಂತಿತಂತೆ. ಅದುಕಾರಣ ಈಊರಿಗೆ ಮೇಲೆ ಹೇಳಿದ ಹೆಸರು ಪ್ರಾಪ್ತವಾಯಿತೆಂದು ಪ್ರತೀತಿ. ಇದಕ್ಕೆ ಇರುವ ಇನ್ನೊಂದು ಹೆಸರು ಶ್ರೋತ್ರಿಯೂರು. ಈ ಗ್ರಾಮವು ಗುರುಗಳು ಆಗಮಿಸುವುದಕ್ಕೆ ಮುನ್ನವೇ ಶ್ರುತಿ–ಆಗಮ–ಪುರಾಣ ಉಪನಿಷತ್ತು ಮುಂತಾದವುಗಳಲ್ಲಿ ಪಾರಂಗತರಾಗಿದ್ದು ವಿದ್ವಾಂಸರಿಂದ ಆವೃತವಾಗಿದ್ದಿತೆಂದೂ ಊಹಿಸಲವಕಾಶವಿದೆ.

ವೀರಶೈವಕ್ಕೆ ಮೊದಲಿದ್ದ ಲಕುಲೀಶ, ಪಾಶುಪಥ, ಕಾಳಾಮುಖ ಮುಂತಾದ ಪ್ರಭೇದಗಳನ್ನು ಸುಧಾರಿಸಿದವರು ಬಸವಣ್ಣನವರೆಂಬುದು ಸರ್ವವಿದಿತ. ಮಗ್ಗೆಯ ಮಾಯಿದೇವರು ಹೇಳಿರುವಂತೆ ಅಣ್ಣನವರು "... ....ಭಕ್ತಜನ ಭಾಗ್ಯ ಶುಭೋದಯ ವೀರಶೈವ ನಿರ್ಣಯ ಪರಮಾವತಾರ ಶರಣಾಗತ ರಕ್ಷಕ .......__......." ಈ ವಿಶೇಷಣಗಳನ್ನು 'ವೀರಶೈವ'ವನ್ನು ಇದಂ ಇತ್ಥಂ ಎಂದು ನಿರ್ಣಯಿಸಿದ ಮಹಾನುಭಾವರೆನ್ನುವುದರಲ್ಲಿ ಯಾವ ಸಂಶಯವೂ ಇಲ್ಲ. ಅಂದರೆ ಅಣ್ಣನವರಿಗಿಂತ ಮೊದಲು 'ವೀರಶೈವ' ಇರಲಿಲ್ಲವೆಂದು ಅರ್ಥವಲ್ಲ – ಎಂದು ಸ್ಪಷ್ಟಪಡಿಸ ಬೇಕಾದ ಅಗತ್ಯವಿಲ್ಲ ಅಲ್ಲವೆ?

ಯಾರು ಲಿಂಗಪೂಜೆಯನ್ನು ಅನವರತ ಮಾಡಿಕೊಂಡಿರುತ್ತಾ ಸಹಸ್ರಾರು ಜನ ವಿದ್ಯಾರ್ಥಿಗಳಿಗೆ 'ಜ್ಞಾನಾನ್ನದಾನ' ಮಾಡುತ್ತ ರಾಜಪೂಜಿತರಾಗಿದ್ದರೋ ಅಂತಹವರನ್ನು ಕಾಳಾಮುಖಗುರುಗಳು ಎಂದು ಕರೆಯುತ್ತಿದ್ದಕಾಲವದು. ಜೊತೆಗೆ ಅಂತಹವರು ಶಿವನೊಳಗಾದ ಮೇಲೆ ಅಂದರೆ ದೇಹವನ್ನು ಬಿಟ್ಟು ಸ್ವಸ್ಥಾನಕ್ಕೆ ತೆರಳಿದ ಮೇಲೆ, ಅವರ ಗದ್ದುಗೆಯ ಮೇಲೆ 'ನಂದಿ' ಯನ್ನೇ ಪ್ರತಿಷ್ಠಾಪಿಸಲಾಗುತ್ತಿದ್ದಿತು, ಲಿಂಗವನ್ನಲ್ಲ, ಆದಿಜಗದ್ಗುರು ಭಗವತ್ಪಾದರ ಸನ್ನಿಧಿಯಲ್ಲಿ ಕಾಣುವುದೂ

ಅದನ್ನೇ ಬಸವಾದಿ ಪ್ರಮಥರಿಂದೀಚೆಗೆ ಲಿಂಗಪ್ರತಿಷ್ಠಾಪನೆಯೂಗಿರುವುದು ಕಂಡು ಬರುತ್ತದೆ.

ಅದಿಜಗದ್ಗುರು ಶ್ರೀ ಶಿವರಾತ್ರೀಶ್ವರ ಭಗವತ್ಪಾದರು ಸುಮಾರು 1000 ವರ್ಷಗಳಿಗೂ ಹಿಂದೆ ಸಿದ್ಧಗಿರಿ ( ಶ್ರೀ ರೇವಣ್ಣಸಿದ್ಧೇಶ್ವರ ) ಕ್ಷೇತ್ರದಿಂದ ಆಗಮಿಸಿ, ಕಪಿಲಾ ನದಿಯ ತೀರದಲ್ಲಿ 'ಶಿವಯೋಗ'ದಲ್ಲಿ ತಲ್ಲೀನರಾಗಿದ್ದರು. ಆಗಲೇ ರಾಜೇಂದ್ರನ ಚೋಳನ ಕುದುರೆಯು ಅತ್ಯಾಶ್ಚರ್ಯಕರವಾಗಿ ತಪೋಮಗ್ನರಾಗಿದ್ದ ಶ್ರೀಗುರುಗಳ ಸಮೀಪಕ್ಕೆ ಬಂದು ಪ್ರದಕ್ಷಿಣೆ ಮಾಡಿ ನಿಲ್ಲುವುದು. ಶ್ರೀಗಳವರ ಆಶೀರ್ವಾದದಿಂದ ರಾಜೇಂದ್ರಚೋಳನ ಮನಸ್ಸಿನಲ್ಲಿ ಶತ್ರುರಾಜರ ಮೇಲಿದ್ದ ದ್ವೇಷವು ನಿರ್ನಾಮವಾಗಿ ತಲಕಾಡಿನ ರಾಚಮಲ್ಲನೊಂದಿಗೆ ಸ್ನೇಹ ಮಾಡಿಕೊಳ್ಳುವನು. ಈ ರಾಜರ ಹಾಗೂ ಅಲ್ಲಿನ ಜನತೆಯ ಪ್ರಾರ್ಥನೆಯನ್ನುಲಕ್ಷಿಸಿ ಶ್ರೀ ಶ್ರೀ ಶಿವರಾತ್ರೀಶ್ವರರು 'ವೀರಸಿಂಹಾಸನ ಮಠ' ವನ್ನು ಸುತ್ತೂರಿನಲ್ಲಿ ಸಂಸ್ಥಾಪಿಸಿದರು. ಇಂದಿಗೂ ಅವರ ತಪಸ್ಸಿನ ಪ್ರತಿಭೆ ಭಕ್ತಸಮುದಾಯವನ್ನು ಸಂರಕ್ಷಿಸುತ್ತಿರುವುದು ಭಾವುಕ ಜನರ ನಂಬುಗೆಗೆ ಇಂಬು ಗೊಟ್ಟಿರುತ್ತದೆ.

**ಎರಡನೆಯ ಜಗದ್ಗುರು ಈ ಶಾನೇಶ್ವರ ಒಡೆಯರು :–** ಆದಿಜಗದ್ಗುರುಗಳವರ ಉತ್ತರಾಧಿಕಾರಿಗಳಾಗಿ ಕ್ರಿ. ಶ. ೧೦೩೦ರಲ್ಲಿ ಆಯ್ಕೆಯಾಗಿ ಶ್ರೀ ಮಠದ ಸರ್ವತೋ ಮುಖವಾದ ಸಾಧನೆಗೆ ಕಾರಣರಾದರು. ಇವರ ಬಗೆಗೆ ಸಾಕಷ್ಟು ಶಿಲಾಶಾಸನಗಳೂ ಲಭಿಸಿವೆ. ಒಂದು ಶಾಸನದ ಪ್ರಕಾರ ಶಾಲೀವಾಹನ ಶಕ ೯೫೫ ನೆಯ ವರ್ಷದ ಆಂಗೀರಸ ಸಂವತ್ಸರದ ಕಾರ್ತಿಕ ಬಹುಳ ೨ ನೆಯ ಸೋಮವಾರ ರೋಹಿಣೀ ನಕ್ಷತ್ರದಲ್ಲಿ ( ಕ್ರಿ. ಶ. ೨೩-೧೦-೧೦೩೨ ) ನಡೆದ ರಾಜೇಂದ್ರ ಚೋಳ ಚಕ್ರವರ್ತಿಯ ೩೧ ನೆಯ ಪಟ್ಟಾಭಿಷೇಕದ ಉತ್ಸವಾವಸರದಲ್ಲಿ 'ರಾಜೇಂದ್ರ ಚೋಳದೇವ ಗುರುಶ್ಕಟ್' ಆದ 'ಈಶಾನೇಶ್ವರ ಯುಡಿಯಾರ್ಗ್ಗೆ' ನೀಡಿರುವ ದಾನದತ್ತಿಗಳ ವಿವರವುಂಟು. ಇದೇ ಶಾಸನದಲ್ಲಿ ಸುತ್ತೂರಿನ ಅತ್ಯಂತ ಪ್ರಾಚೀನವೂ ಚೋಳ ಶಿಲ್ಪಮಾದರಿಯದೇ ಆದ ಮೂಲಸ್ಥಾನೇಶ್ವರ ದೇವಾಲಯದ ವಿಷಯ ಪ್ರಸ್ತಾಪಿತವಾಗಿದೆ. ಈ ಸ್ವಾಮಿಗಳ ಕಾಲದಲ್ಲಿ ಶ್ರೀ ಸುತ್ತೂರು ಮಠದ ಖ್ಯಾತಿ ಎಲ್ಲ ಕಡೆಗೂ ಪ್ರಸಾರಿತವಾಗಿದ್ದಿತೆಂದು ತಿಳಿದು ಬರುತ್ತದೆ ( ಈ ಜಗದ್ಗುರುಗಳೇ ಉತ್ತರ ಕರ್ನಾಟಕದತ್ತ ಪ್ರವಾಸ ಹೊರಟು ಕೂಡಲಸಂಗಮದಲ್ಲಿ ನೆಲೆಸಿ ಅಲ್ಲಿನ ಗುರುಕುಲವನ್ನು ಅಭಿವೃದ್ಧಿಪಡಿಸಿ ಬಸವಣ್ಣನವರಂಥ ಶಿಷ್ಯರತ್ನ ಜಗತ್ತಿಗೆ ನೀಡಿದ 'ಈ ಶಾನ ಗುರು' ಅಥವಾ ಜಾತವೇದ ಮುನಿಗಳೆಂದೂ ಒಂದು ಪ್ರತೀತಿಯುಂಟು. ಆದರೆ ಕಾಲದ ದೃಷ್ಟಿಯಿಂದ ಏರುಪೇರಾಗಿ ನಂಬುವುದು ಕಷ್ಟವಾಗುತ್ತದೆಯಾದ್ದರಿಂದ, ಇದು ಸಂಶೋಧನಾರ್ಹ ವಿಷಯವಾಗಿದೆಯೆನ್ನ ಬಹುದು. )



**ಮೂರನೆಯ ಶ್ರೀ ನಿಜಲಿಂಗ ಶಿವಾಚಾರ್ಯರು :–** ಕ್ರಿ. ಶ. ೧೧೯೦ರಲ್ಲಿ ಪೀಠಾಧ್ಯಕ್ಷರಾದ ಇವರು ದೀರ್ಘಕಾಲ ಮಠದ ಶ್ರೇಯೋಭಿವೃದ್ಧಿಗಾಗಿ ದುಡಿದವರು. ಕಲ್ಯಾಣ ಕ್ರಾಂತಿಯ ತರುವಾಯದ ದಿನಗಳಲ್ಲಿ ಆಕಡೆಯಿಂದ ಬಂದ ಶರಣರಿಗೆ ಆಶ್ರಯವಿತ್ತದ್ದುಉಂಟು. ಈ ವೇಳೆಗೆ ಚೋಳರಾಜರ ಪ್ರಾಬಲ್ಯ ಕಡಿಮೆಯಾಗಿ ಹೊಯ್ಸಳರು ಅಭಿವೃದ್ಧಿಯನ್ನೈದಿದರು. ಹೊಯ್ಸಳರ ದಂಡನಾಯಕರಲ್ಲೊಬ್ಬನಾದ ಲಕ್ಷ್ಮಯ್ಯನೆಂಬುವವನು ಸುತ್ತೂರಿನಲ್ಲಿ ಮಹಾ ಮಂಡಲಾಧಿಪತಿಯಾಗಿದ್ದನೆಂದು ಶಾಸನಗಳಿಂದ ತಿಳಿದು ಬರುತ್ತದೆ. ಕಲ್ಯಾಣದಿಂದ ಶರಣರೊಡಗೂಡಿ' ಆಗಮಿಸಿದ ಮುಸುಡಿ ಚೌಡಯ್ಯನವರು ಇವರ ಕಾಲದಲ್ಲೇ ಇಲ್ಲಿ ನೆಲೆಸಿ ಧರ್ಮಪ್ರಸಾರ ಕಾರ್ಯವನ್ನು ಕೈಗೊಂಡು ಆಪ್ರಾಂತದ ಜನರಲ್ಲಿ ಧರ್ಮಜಾಗೃತಿಯನ್ನುಂಟು ಮಾಡಿದರು.

**ನಾಲ್ಕನೆಯ ಶ್ರೀ ಸಿದ್ಧನಂಜದೇಶಿಕರು:–**

ಇವರು ೧೧೭೦ನೆಯ ಇಸವಿಯಲ್ಲಿ ಪಟ್ಟಾಭಿಷಿಕ್ತರಾದರು. ಶೂನ್ಯಪೀಠದ ಆರನೆಯ ಅಧ್ಯಕ್ಷರೆಂದು ನಿರ್ಮಾಯಗಣೇಶ್ವರರೆಂದು, ಖ್ಯಾತರಾದ ಮಲೆಯಮಹದೇಶ್ವರರು ಇವರ ಕಾಲದಲ್ಲಿ ಕೆಲಕಾಲ ಸೇವಾರ್ಪಣ ಭಾವದಿಂದ ಇದ್ದು ಶಿವಯೋಗದ ರಹಸ್ಯಗಳನ್ನರಿತುದು-ಎಂದು ಸ್ಥಳಪುರಾಣದಿಂದ ತಿಳಿದು ಬರುತ್ತದೆ. ಸುತ್ತೂರಮಠದಲ್ಲಿ ಆಮಹನೀಯರು ಅನುಷ್ಠಾನ ಮಾಡುತ್ತಿದ್ದ ಸ್ಥಳವೇ ಅವರ ಹೆಸರಿನ ಗದ್ದುಗೆಯೂಗಿ ಇಂದು ವಿರಾಜಿಸುತ್ತಾ ನಿತ್ಯವೂ ಅಲ್ಲಿ ಪೂಜಾಕೈಂಕರ್ಯ ನಡೆಯುತ್ತಿದೆ. ಅವರು ಇಲ್ಲಿ ಇದ್ದಾಗ ಮಾಡಿದ ಅಸಂಖ್ಯ ಪವಾಡಗಳು ಜನಮನದಲ್ಲಿ ಇನ್ನೂ ಉಳಿದು ಬಂದಿದೆ. ಶ್ರೀಮಠದಲ್ಲಿರುವ ರಾಗಿ(ಬೀಸುವ)ಕಲ್ಲು ಕೂಡ ಒಂದು ಸಾಕ್ಷಿಯೂಗ್ಗಿ ನಿಂತಿರುತ್ತದೆ. ವೀರಶೈವಧರ್ಮತತ್ವಗಳ ಮೇಲಿನ ಉತ್ತಮ ವ್ಯಾಖ್ಯಾನ ವೆನಿಸಿದ 'ಪರಮ ಶಿವಾಧಿಕ್ಯ ಚೂಡಾಮಣಿ' ಗ್ರಂಥವನ್ನು ರಚಿಸಿದ್ದಾರೆಂದ ಮೇಲೆ ಶ್ರೀಸಿದ್ಧನಂಜೇಶ್ವರರ ಪ್ರತಿಭೆ ಚೆನ್ನಾಗಿಯೇ ಅಭಿವ್ಯಕ್ತವಾಗುತ್ತದೆ. ಇವರು ತಮ್ಮ ಅಂತಿಮ ಕಾಲವನ್ನು ಮಲೆಯಮಹದೇಶ್ವರರ ಕ್ಷೇತ್ರದಲ್ಲಿಯೇ ಕಳೆದುದಾಗಿ ತಿಳಿದು ಬರತ್ತದೆ.

**ಐದನೆಯ ಶ್ರೀಕಪಿನೀ ನಂಜುಂಡ ದೇಶಿಕರು:–**

ಕ್ರಿ.ಶ. ೧೨೪೦ರಲ್ಲಿ ಪಟ್ಟಾಭಿಷಿಕ್ತರಾದ ಇವರು 'ಅಮುಗಿದೇವಯ್ಯಗಳ ಸಾಂಗತ್ಯ' ಕೃತಿಯನ್ನು ರಚಿಸಿದ ಶಿವಲಿಂಗ ಕವಿಯ ಗುರುಗಳು ಹಾಗೂ ಆಶ್ರಯದಾತರು ಆಗಿದ್ದರು. ಆತನೇ ಅಂದರೆ ಕವಿಯೇ ಬರೆದಿರುವ ಗುರುಸ್ತುತಿ-ಭಾಗ ಇಂತಿದೆ:

ಸುತ್ತೂರ ಸಿಂಹಾಸನಾಧೀಶ ಕಪ್ಪಿನ
ಮುಕ್ತಿದಾಯಕ ನಂಜೇಶ್ವರನ

ಹಸ್ತದಿ ಜನಿಸಿದ ಭೃತ್ಯ ಶಿವಾನಂದ
ವಿಸ್ತರಿಸಿದ ನಿಜಕಥೆಯ
(ಅಮುಗಿದೇವಯ್ಯಗಳ ಸಾಂಗತ್ಯ, ಸಂಧಿ೭, ಪದ್ಯ೧೧೦)

**ಆರನೆಯ ಶ್ರೀ ಚೆನ್ನವೀರ ದೇಶಿಕೇಂದ್ರರು:–**

ಕ್ರಿ. ಶ. ೧೩೧೦ರಲ್ಲಿ ಪೀಠಾರೋಹಣ ಮಾಡಿದ ಇವರು ತಮ್ಮ ಶಿಷ್ಯರಲ್ಲಿಯೇ ಒಬ್ಬರಾಗಿದ್ದ ಶ್ರೀ ಸಿದ್ಧಮಲ್ಲಿಕಾರ್ಜುನರು ಅಥವಾ ಸಿದ್ಧಮಲ್ಲ ಶಿವಾಚಾರ್ಯರನ್ನು ತಮ್ಮ ಉತ್ತರಾಧಿಕಾರಿಗಳನ್ನಾಗಿ ಆರಿಸಿದ್ದಲ್ಲದೆ ಅವರಿಗೆ ಸೂಕ್ತ ತರಬೇತಿಯನ್ನೂ ನೀಡಿ ಆಸ್ಥಾನಕ್ಕೆ ಅರ್ಹರನ್ನಾಗಿಸಿದರು. ಕೊಂಗಹಳ್ಳಿಯ ಮಲೆಗಳಲ್ಲಿ ಶಿವೈಕ್ಯರಾದಂತೆ ತಿಳಿದು ಬರುತ್ತದೆ.

**ಏಳನೆಯ ಶ್ರೀ ಸಿದ್ಧಮಲ್ಲ ಶಿವಾಚಾರ್ಯರು:–**

೧೩೮೦ರಲ್ಲಿ ಪಟ್ಟಾಧಿಕಾರಿಗಳಾಗಿ ನಿಯುಕ್ತರಾದ ಇವರು, ಆಗಿನ ಕಾಲದ ಕಾರಣಿಕ ಪುರುಷರೆನಿಸಿದ ಹರದನಹಳ್ಳಿ ಶೂನ್ಯಪೀಠದ ಶ್ರೀ ಗೋಸಲ ಚನ್ನಬಸವೇಶ್ವರರ ಹಾಗೂ ತೋಂಟದ ಸಿದ್ಧಲಿಂಗೇಶ್ವರರ ಒಡನಾಡಿಗಳಾಗಿದ್ದು ಧಾರ್ಮಿಕ ಪ್ರವಾಸದಲ್ಲಿ ತೋಂಟದಾರ್ಯರ ಜತೆಯಲ್ಲಿಯೇ ಇದ್ದುದಾಗಿ ವಿರಕ್ತ ತೋಂಟದಾರ್ಯರು ೧೬೬೦ರಲ್ಲಿ ರಚಿಸಿದ 'ಸಿದ್ಧೇಶ್ವರ ಪುರಾಣ, ದಿಂದ ತಿಳಿದು ಬರುತ್ತದೆ.

**ಎಂಟನೆಯ ಶ್ರೀ ಪರ್ವತೇಂದ್ರ ಶಿವಾಚಾರ್ಯರು:–**

ಕ್ರಿ. ಶ. ೧೪೭೦ರಲ್ಲಿ ಪಟ್ಟಕ್ಕೆ ಬಂದ ಇವರು ಅನೇಕ ಪವಾಡಗಳನ್ನು ಮೆರೆದು ಬಡಬಗ್ಗರ ತೊಂದರೆಗಳನ್ನು ನಿವಾರಿಸಿ ಸುತ್ತೂರಿನಲ್ಲಿಯೇ ಶಿವೈಕ್ಯರಾದುದಾಗಿ ತಿಳಿದು ಬರುತ್ತಿದೆ.

**ಒಂಬತ್ತನೆಯ ಶ್ರೀ ಭಂಡಾರಿ ಬಸಪ್ಪ ಒಡೆಯರು:–**

೧೪೯೦ರಲ್ಲಿ ಆಶ್ರಮ ಸ್ವೀಕಾರ ಮಾಡಿದ ಇವರು ನಂಜನಗೂಡಿನ ಕಪಿಲಾ-ಕೌಂಡಿನ್ಯ (ಗುಂಡ್ಲು) ನದಿಗಳ ಸಂಗಮದಲ್ಲಿ ದೇವಾಲಯವೊಂದನ್ನು ನಿರ್ಮಿಸಿ ಸಂಗಮೇಶ್ವರ ಲಿಂಗವನ್ನು ಪ್ರತಿಷ್ಠಾಪಿಸಿದರೆಂದು ೧೫೧೪ ರ ಶಾಸನದಿಂದ ತಿಳಿದು ಬರುತ್ತದೆ.

(ಯದುರಾಯರು-ಕೃಷ್ಣರಾಯರು ಮೈಸೂರು ಚಾಮುಂಡಿ ಬೆಟ್ಟಕ್ಕೆ ಬಂದಿದ್ದಾಗ್ಗೆ ಅಕಸ್ಮಾತ್ ದರ್ಶನವಿತ್ತ ಬಸಪ್ಪ ಒಡೆಯರು ಕಾರುಗಹಳ್ಳಿಯ ದುಷ್ಟ ಪಾಳೆಯಗಾರ



ನನ್ನು ಸಂಹರಿಸಿ ಹದಿನಾಡಿನ ಮಹಾರಾಣಿ ಹಾಗೂ ರಾಜ ಪುತ್ರಿಯನ್ನು ಸಂರಕ್ಷಿಸಿ ಮೈಸೂರು ಮಹಾರಾಜರ ಸಿಂಹಾಸನ ಸ್ಥಾಪನೆಗೆ ಕಾರಣರಾದರೆಂದು ಐತಿಹ್ಯವಿದೆ. ಅದರಿಂದಲೇ ಮುಂದಿನ ಎಲ್ಲ ಮೈಸೂರು ರಾಜರೂ ತಮ್ಮ ಹೆಸರಿನ ಅಂತ್ಯದಲ್ಲಿ 'ಒಡೆ-ಯರು" ಎಂದು ಇಟ್ಟುಕೊಳ್ಳುವ ಪರಿಪಾಠಿ ಉಂಟಾಯಿತೆಂದು ಪ್ರತೀತಿಯುಂಟು ಐತಿಹಾಸಿಕ ಸಂಶೋಧನೆಗೆ ಅರ್ಹವಿಶಯವಿದು.)

ಇವರು ತಮ್ಮ ಕೊನೆಗಾಲವನ್ನು ಕೊಡಗಿನ ಸುಂದರ ಪ್ರದೇಶಗಳಲ್ಲಿ ಕಳೆದು ಅದೇಪ್ರಾಂತದ ಕಲ್ಲೂರಿನಲ್ಲಿ ಬಯಲಾದಂತೆ ತಿಳಿದು ಬರುತ್ತದೆ.

**ಹತ್ತನೆಯ ಶ್ರೀ ಕೂಗಲೂರು ನಂಜುಂಡ ದೇಶಿಕೇಂದ್ರರು:–**

೧೫೧೫ ನೆಯ ಇಸವಿಯಲ್ಲಿ ಅಧಿಕಾರವನ್ನು ವಹಿಸಿಕೊಂಡ ಇವರು ವಿಖ್ಯಾತ ವಚನಕಾರರೂ ಶ್ರೀ ತೋಂಟದ ಸಿದ್ಧಲಿಂಗೇಶ್ವರರ ಕೃಪಾ ಪಾತ್ರರೂ ಆದ ಘನಲಿಂಗ-ದೇವರನ್ನು ತಮ್ಮ ಉತ್ತರಾಧಿಕಾರಿಗಳನ್ನಾಗಿ ನಿಯೋಜಿಸುವಲ್ಲಿ ಯಶಸ್ವಿಗಳಾದರು. ಬೆಂಗಳೂರು ಜಿಲ್ಲೆಯ ರಾಮನಗರದ ಬಳಿಯಿರುವ ಶ್ರೀ ರೇವಣ್ಣಸಿದ್ಧೇಶ್ವರ ಬೆಟ್ಟದಲ್ಲಿ ಬಯಲಾದರು.

(ಮುಂದುವರೆಯುತ್ತದೆ.)

---

# ಬಾಲ್ಯ ಶಿಕ್ಷಣದಲ್ಲಿ ಸಮಾಜದ ಹೊಂದಾಣಿಕೆ

– ಹೆಚ್. ಜಿ. ತಪಣಿ
ಉಪಾಧ್ಯಾಯರು. ಸಿದ್ಧಗಂಗಾ ಶಿಕ್ಷಣಸಂಸ್ಥೆ.

ಮಾನವ ಸಮಾಜ ಜೀವಿ. ಸಂಘ ಜೀವಿ. ಇವನು ಸಮಾಜವನ್ನು ಬಿಟ್ಟು ಎಂದಿಗೂ ಬಾಳಲಾರ. ಮಷ್ಯನಿಗೆ ಮನುಷ್ಯತ್ವವು ಪ್ರಾಪ್ತವಾಗಬೇಕಾದರೆ ಶಿಕ್ಷಣವು ಅತ್ಯಾವಶ್ಯಕವಾಗಿರಬೇಕು. ಆಧುನಿಕ ಪ್ರಪಂಚದಲ್ಲಿ ಬೆಳೆಯುತ್ತಿರುವ ಶಿಕ್ಷಣವನ್ನು ನೋಡಿದರೆ ನಮಗೆ ಪರಮಾಶ್ಚರ್ಯವಾಗುತ್ತದೆ. ಸಮಾಜ ಮತ್ತು ಶಿಕ್ಷಣ ಇವು–ಗಳಲ್ಲಿನ ಬದಲಾವಣೆಯನ್ನು ಸೂಕ್ಷ್ಮವಾಗಿ ಗಮನಿಸಬೇಕಾಗುತ್ತದೆ. ಶಿಶುವು ಸರ್ವಾಂಗ ಸಂಪೂರ್ಣವಾಗಿದ್ದರೂ ಎದ್ದು ಓಡಾಡುವುದಕ್ಕೆ ಎರಡು ವರ್ಷವಾದರೂ ಬೇಕು. ಹಾಗೆ ಎದ್ದು ಓಡಾಡುವುದಕ್ಕೆ ಮುಂಚೆ ಎಷ್ಟೋಸಲ ಎದ್ದು ಬಿದ್ದು ಪ್ರಯತ್ನಮಾಡಿ ಕೊನೆಗೆ ಸ್ವತಂತ್ರವಾಗಿ ಓಡಾಡಲು ಶಕ್ತವಾಗುತ್ತದೆ. ನಮಗೆಲ್ಲಾ ಓಡಾಡುವುದು ಬಹಳ ಅಭ್ಯಾಸವಾಗಿರುವುದರಿಂದ ಅದನ್ನು ಕಲಿಯುವಾಗ ಪಟ್ಟಶ್ರಮವೆಲ್ಲ ಮರೆತು ಹೋಗಿದೆ. ಆದರೂ ಇಂದನ ನಮ್ಮ ನಡಿಗೆ ಓಡಾಟಕ್ಕೆ ಹಿಂದೆ ಆರಂಭದಲ್ಲಿ ಮಾಡಿದ ಹಲವಾರು ಅಲ್ಲ, ನೂರಾರೂ ಪ್ರಯತ್ನಗಳು ಕಾರಣ. ಹೀಗೆಯೆ ಸಮಾಜ ಮತ್ತು ಶಿಕ್ಷಣ ಇವು–ಗಳಲ್ಲಿ ಬದಲಾವಣೆನೆಡೆಯುವುದಕ್ಕೆ ಹಿಂದೆ ಆರಂಭದಲ್ಲಿ ಮಾಡಿದ ಹಲವಾರು ಅಲ್ಲ, ನೂರಾರು ಪ್ರಯತ್ನಗಳು ಕಾರಣವಾಗಿವೆ.

ಮಗುವಿಗೆ ಶಿಕ್ಷಣವನ್ನು ಕಲ್ಪಿಸಿಕೊಡಬೇಕಾದರೆ ಆ ಮಗುವಿನ ಪರಿಸರ ಮತ್ತು ಅನುವಂಶೀಯತೆಯ ಆಧಾರದ ಮೇಲೆ ಶಿಕ್ಷಣವನ್ನು ಒದಗಿಸಬೇಕಾಗುತ್ತದೆ. ಆದ್ದರಿಂದಲೇ ಮಗುವಿನ ಸರ್ವಾಂಗ ಸಂಪೂರ್ಣ ಬೆಳವಣಿಗೆಗೂ ಮತ್ತು ಅದೋಗತಿಗೂ ಸಮಾಜವೇ ಕಾರಣೀಭೂತವಾಗುತ್ತದೆಂದು ಹೇಳಬಹುದು. ಹೀಗೆ ಮಗುವಿನ ಉದ್ಧಾರ ಮತ್ತು ಅದೋಗತಿಗೆ ಕಾರಣವಾದ ಸಮಾಜ ತನ್ನ ನಡವಳಿಕೆಯಲ್ಲಿ ಕಂಡುಬರುವ ತಪ್ಪುಗಳನ್ನು ತಿದ್ದಿ ಕೊಳ್ಳಬೇಕಾಗುತ್ತದೆ. ಸಮಾಜದಲ್ಲಿ ಹುಟ್ಟಿದ ಮಗು ಹುಟ್ಟಿದಂದಿ ನಿಂದಲೇ ದಡ್ಡನಾಗಲಾರದು. ಇದಕ್ಕೆ ಒಂದು ಉದಾಹರಣೆಯನ್ನು ಕೊಡಬಹುದು. ಒಬ್ಬ ಉಪಾಧ್ಯಾಯರು ಒಂದನೇ ತರಗತಿಯ ಮಕ್ಕಳಿಗೆ ಬಲಿಚಕ್ರವರ್ತಿಯ ಕಥೆಯನ್ನು ಹೇಳುವಾಗ ................. ವಾಮನಾವತಾರದಲ್ಲಿ ಬಂದ ಶ್ರೀಕೃಷ್ಣ ಬಲಿಚಕ್ರವರ್ತಿಯನ್ನು ಮೂರು ಪಾದ ಭೂಮಿ ಕೊಡು ಎಂದು ಕೇಳುತ್ತಾನೆ. ಆ ವಾಮನು ಒಂದೇ ಪಾದಕ್ಕೆ ಭೂಮಿಯನ್ನು ಇನ್ನೊಂದು ಪಾದಕ್ಕೆ ಆಕಾಶವನ್ನು ಅಳೆದು ಮತ್ತೊಂದು ಪಾದವನ್ನು



ಎಲ್ಲಿ ಇಡಲಿ ಎಂದು ಕೇಳುತ್ತಾನೆ. ಆಗ ಒಬ್ಬ ವಿಧ್ಯಾರ್ತಿಯು‚‚ಸ್ವಾಮಿ ಭೂಮಿಯನ್ನು ಒಂದೇ ಪಾದಕ್ಕೆ ಇಟ್ಟಮೇಲೆ ಬಲಿಚಕ್ರವರ್ತಿ ಎಲ್ಲಿ ನಿಂತಿದ್ದ ? ಎಂದು ಕೇಳಿದನು. ಆಗ ಉಪಾಧ್ಯಾಯರಿಗೆ ಉತ್ತರ ತೋಚದೆ ಕಂಗಾಲಾಗಿ ಪಿಳಪಿಳನೆ ಕಣ್ಣುಬಿಡುತ್ತಿರುವಾಗ ...............ಮತ್ತೊಬ್ಬ ವಿಧ್ಯಾರ್ಥಿ, ‚‚ವಾಮನುಒಂದೇ ಪಾದದಿಂದ ಭೂಮಿಯನ್ನು ಅಳದಿರಬೇಕಾದರೆ, ಅವನ ಕಾಲ್‌ಬೆರಳುಗಳ ಸಂಧಿಯು ವಿಶಾಲವಾಗಿರಬೇಕು ಆ ಸ್ಥಳದಲ್ಲಿ ಬಲಿಚಕ್ರವರ್ತಿ ನಿಂತಿರಬಹುದು ‚‚ ಎಂದುಉತ್ತರಿಸಿದನು. ಇದರಿಂದ ತಿಳಿದುಬರುವುದೇನೆಂದರೆ ಮಗುವ ಹುಟ್ಟನಿಂದ ದಡ್ಡನಾಗುವುದಿಲ್ಲ ಅವನು ಬೆಳೆಯುತ್ತಿರುವ ಸಮಾಜದಲ್ಲಿನ ಪರಿಸರ ಅವನನ್ನು ಅದೋಗತಿಗೆ ಹೊಯ್ಯುತ್ತದೆ. ಇದಕ್ಕೆ ಸಮಾಜದಲ್ಲಿ ಇರುವ ಮುಖ್ಯ ಕಾರಣಗಳನ್ನು ಈ ಕೆಳಗಿನಂತೆ ವಿವರಿಸಬಹುದು.

ಸಾಧಾರಣವಾಗಿ ನಾವು ಮಕ್ಕಳನ್ನು ಆಟದಗೊಂಬೆಗಳಂತೆ ಭಾವಿಸುತ್ತೇವೆ. ನಮಗೆ ಸಂತೋಷವಾಗಿರುವಾಗ ಅವರನ್ನು ಹತ್ತಿರಕರೆದು ಮುದ್ದಾಡುತ್ತೇವೆ. ನಾವು ಕೆಲಸಗಳಲ್ಲಿ ತೊಡಗಿರುವಾಗ ಅಥವಾ ನಮಗೆ ಅಸಮಧಾನ ಉಂಟಾಗಿರುವಾಗ ಅವರನ್ನು ನಿರ್ಲಕ್ಷಿಸಿ ದೂರಮಾಡುತ್ತೇವೆ, ಹೀಗೆ ಮಕ್ಕಳ ಜೊತೆಯಲ್ಲಿ ನಾವು ಯಾವ ರೀತಿ ವರ್ತಿಸುವೆವೆಂಬುದು ನಮ್ಮ ಆ ಕ್ಷಣದ ಮನೋಭಾವಗಳನ್ನು ಅನುಸರಿಸಿರುತ್ತದೆ. ನಮ್ಮ ಈ ವರ್ತನೆಯು ಮಕ್ಕಳ ಮನಸ್ಸಿನ ಮೇಲೆ ಒಂದು ದುಷ್ಪರಿಣಾಮವನ್ನುಂಟು ಮಾಡುವುದು. ಅವರಿಗೆ ನಮ್ಮನ್ನು ಕಂಡರೆ ಹೆದರಿಕೆಯುಂಟಾಗುವುದು. ನಾವು ಅವರನ್ನು ಆದರಿಸಿ ಕರೆಯುತ್ತೇವೆಯೋ ಅಥವಾ ಕೋಪಿಸಿಕೊಂಡು ದೂರ ಮಾಡುತ್ತೇವೆಯೋ ಎಂಬ ಸಂಶಯವು ಅವರಲ್ಲಿ ಹುಟ್ಟುವುದು. ಈ ಸಂಶಯದಿಂದ ಅವರ ಮನಸ್ಸಿನಲ್ಲಿ ಒಂದು ಒಳತೋಟಿಯುಂಟಾಗುವುದು. ಇಂತಹ ಒಳತೋಟಿಯು ಯಾವಾಗಲೂ ಮಕ್ಕಳ ಮನಸ್ಸನ್ನಾಕ್ರಮಿಸಿದರೆ ಅದು ಅವರ ವ್ಯಕ್ತಿತ್ವಕ್ಕೆ ಕುಂದುತರುವುದು. ಆದುದರಿಂದ ನಾವು ಅವರಿಗೂ ಆತ್ಮಗೌರವ ಕೊಪ-ತಾಪಗಳಿವೆ ಎಂಬುವುದನ್ನು ಮರೆತು ವರ್ತಿಸಬಾರದ ಅವರ ವ್ಯಕ್ತಿತ್ವದ ವಿಕಾಸಕ್ಕೆ ತಕ್ಕ ಸಲಕರಣೆಗಳನ್ನೊದಗಿಸುವುದು ನಮ್ಮ ಸಮಾಜದ ಧರ್ಮ.

ಕೆಲವು ಮಕ್ಕಳಲ್ಲಿ ಸೋಮಾರಿತನವನ್ನು ನೋಡಬಹುದು. ಈ ಸೋಮಾರಿತನಕ್ಕೆ ಮುಖ್ಯ ಕಾರಣಗಳು ಅನಾರೋಗ್ಯ ಮತ್ತು ಕೆಲಸದಲ್ಲಿ ಅಭಿರುಚಿ ಇಲ್ಲದೆ ಇರುವುದು. ಶಾಲೆಯ ಪಾಠವನ್ನು ಹುಡುಗರಿಂದ ಅಭಿರುಚಿ ಹುಟ್ಟಿಸುವ ಹಾಗೆ ಹೇಳಿ ಕೊಟ್ಟರೆ ಆಗ ಸೋಮಾರಿತನವು ಎಂದಿಗೂ ಇರಲಾರದು ಇದನ್ನು ಬಿಟ್ಟು. ಹುಡುಗನನ್ನು “ನೀನು ಸೋಮಾರಿ, ದಡ್ಡ, ಓದು ನಿನ್ನ ತಲೆಗೆ ಹತ್ತುವುದಿಲ್ಲ'' ಎಂದು ಮೂದಲಿಸಿ ಬಯ್ದರೆ ಅದರಿಂದ ಬಹಳ ಕೆಡಕುಂಟಾಗುವುದು. ಇದರಿಂದ ಹುಡುಗನಿಗೆ ನಿರಾಶೆ ಹುಟ್ಟಿ ಅವನು ಖಂಡಿತ ಹಿಂದೆ ಬೀಳುವುದರಲ್ಲಿ ಅನುಮಾನವಿಲ್ಲ. ಹುಡುಗನಿಗೆ ದೊಡ್ಡವರ ಮಾತಿನಲ್ಲಿ ಬಹಳ ನಂಬಿಕೆ. ದೊಡ್ಡವರು ತನ್ನನ್ನು ಕೆಲಸಕ್ಕೆ ಬಾರದವನೆಂದು

ಬಯ್ದರೆ ತಾನು ಕೆಲಸಕ್ಕೆ ಬಾರದವನೆಂದೇ ನಂಬಿ ಹಿಂದುಳಿಯುವನು. ಅಣ್ಣ-ತಮ್ಮಂದಿರಲ್ಲಿ, ಅಕ್ಕ-ತಂಗಿಯರಲ್ಲಿ ಅಸೂಯೆ ಹುಟ್ಟುವುದಕ್ಕೆ ಇದೇ ಮೂಲಕಾರಣ ಯಾವಾಗಲೂ ಇತರ ಹುಡುಗರನ್ನು ಹೊಗಳಿ ಈ ಹುಡುಗನನ್ನು ನಿಂದಿಸಿದರೆ ಅವನಲ್ಲಿ ತಾನು ಕೀಳೆಂಬ ಭಾವನೆಯು ಶಾಶ್ವತವಾಗಿ ನಿಲ್ಲುವುದು. ಮಕ್ಕಳನ್ನು ನಿಂದಿಸುವುದರಿಂದ ಆಗುವ ಒಳಿತಿಗಿಂತ ಕೆಡುಕೆ ಹೆಚ್ಚೆಂದು ತಿಳಿಯುತ್ತದೆ. ಮತ್ತೆ ಇತರ ಹುಡುಗರಲ್ಲಿ ದ್ವೇಷ ಮತ್ತು ಅಸೂಯೆ ಹುಟ್ಟುವುದು. ಇದಕ್ಕೆ ಕಾರಣ ಸಮಾಜದಲ್ಲಿದ್ದ ದೊಡ್ಡವರ ನಡವಳಿಕೆಯಲ್ಲಿನ ದೌರ್ಬಲ್ಯ ಎಂದು ಹೇಳಬಹುದು. ಈ ದೌರ್ಬಲ್ಯವನ್ನು ದೂರತಳ್ಳುವವರೆಗೆ ಮಕ್ಕಳಿಗೆ ಸರಿಯಾದ ಶಿಕ್ಷಣವನ್ನು ಕಲ್ಪಿಸಿಕೊಡಲಾಗದು.

ಇಂದಿನ ಸಮಾಜದಲ್ಲಿ ಮನುಷ್ಯನ ಬುದ್ಧಿಗೆ ಮಹತ್ವವನ್ನು ಕೊಡಲಾಗಿದೆ. ಯಾರು ಬುದ್ಧಿಶಾಲಿಗಳೋ ಅವರೇ ಶ್ರೇಷ್ಠರು; ಅವರೇ ಸುಶಿಕ್ಷಿತರು; ಅವರ ಮನಸ್ಸು ಎಷ್ಟೇ ಹೀನಾಯವಾದುದಿರಲಿ, ಅವರು ಎಂತಹ ದುರಾಚಾರ ದುರ್ಗುಣಗಳುಳ್ಳವರೇ ಆಗಿರಲಿ, ಅವರಲ್ಲಿ ಅದ್ವಿತೀಯವಾದ ಬುದ್ಧಿ ಸಾಮರ್ಥ್ಯವೊಂದಿದ್ದರೆ ಸಾಕೆಂದು ತಿಳಿಯುತ್ತಿರುವ ಈಗಿನ ಶಿಕ್ಷಣವು ಮನುಷ್ಯತ್ವ ಪ್ರಾಪ್ತಿಗೆ ಪ್ರಬಲವಾದ ಪ್ರತಿಬಂಧವನ್ನುಂಟು ಮಾಡುತ್ತಲಿದೆ.

ಮಗುವು ಯಾವುದಾದರೂ ತಪ್ಪುಮಾಡಿದಾಗ ಗದರಿಸಿ ಹೊಡೆಯುವುದು ಸರಿಯಲ್ಲ. ಇದರಿಂದ ಮಗುವಿಗೆ ಹೆದರಿಕೆ ಉಂಟಾಗುತ್ತದೆ ಈ ಶಿಕ್ಷೆಯ ಉದ್ದೇಶದಿಂದಲೇ ಮಗು ಕೆಟ್ಟಕೆಲಸವನ್ನು ಮಾಡುತ್ತದೆ. ಹುಡುಗರು ಸುಳ್ಳು ಹೇಳಲು ಈ ರೀತಿಯ ಹೆದರಿಕೆ ಒಂದು ಮುಖ್ಯ ಕಾರಣ. ಸುಳ್ಳನ್ನು ಹೇಳುವುದೇ ಕ್ರಮೇಣ ಒಂದು ದುರಾಭ್ಯಾಸವಾಗುವುದು. ಆದರಿಂದ ತಂದೆ-ತಾಯಿಗಳು ಮಕ್ಕಳಿಗೆ ಹೆದರಿಕೆಯುಂಟಾಗದ ರೀತಿಯಲ್ಲಿ ವರ್ತಿಸಬೇಕು.

ಮಗುವು ಅನುಚಿತವಾದ ಕೆಲಸಮಾಡಿದರೆ ಅದನ್ನು ತಕ್ಷಣವೇ ತಿದ್ದಬೇಕು. ಅಲ್ಲದೆ "ಸಾಯಂಕಾಲ ನಿಮ್ಮ ತಂದೆಯವರು ಬರಲಿ ಅವರಿಗೆ ಹೇಳಿ ನಿನಗೆ ತಕ್ಕ ಶಿಕ್ಷೆ ಮಾಡಿಸುತ್ತೇನೆ" ಎಂದು ತಾಯಿಂದಿರು ಹೆದರಿಸುವುದುಂಟು. ಇದೇ ರೀತಿ ಅನೇಕ ಉಪಾಧ್ಯಾಯರು ಹೆದರಿಸುತ್ತಾರೆ ಇದು ಸರಿಯಲ್ಲ. ಏಕೆಂದರೆ ಮಗುವು ತನಗೆ ಮುಂದೆ ಯಾವಘೋರಶಿಕ್ಷೆ ಕಾದಿದೆಯೋ ಎಂದು ತಪಿಸುತ್ತಾ ತಂದೆ ಬರುವವರೆಗೂ ತನ್ನ ದೈನಂದಿನ ಕಾರ್ಯಗಳಲ್ಲಿ ನಿರುತ್ಸಾಹಿಯಾಗಿರುವುದು. ಆದುದರಿಂದ ತಪ್ಪುಮಾಡಿದ ತಕ್ಷಣವೇ ಮಗುವಿಗೆ ಸರಿಯಾದ ಬುದ್ಧಿ ಕಲಿಸುವುದು ಉತ್ತಮ.

ಸಮಾಜದಲ್ಲಿ ಶಿಕ್ಷಣವನ್ನು ಪಡೆದ ಮಾನವನು ಕೆಲವೊಂದು ವೇಳೆ ಸಮಾಜ ಘಾತಕದ ಕೆಲಸವನ್ನು ಮಾಡುತ್ತಾನೆ. ಈ ಸಮಾಜ ಘಾತಕ ಕೆಲಸವನ್ನು ಗ್ರಂಥ



ಭಂಡಾರದಲ್ಲಿ ನೋಡಬಹುದಾಗಿದೆ. ಸ್ವಾರ್ಥಕ್ಕಾಗಿ ಗ್ರಂಥಗಳನ್ನು ಮತ್ತು ಗ್ರಂಥ ಭಾಗಗಳನ್ನು ಕದ್ದೊಯ್ಯುವುದು, ಮುಂತಾದ ಪ್ರಕರಣಗಳು ಇಂದೂಸಹ ನಡೆಯುತ್ತಿವೆ. ಇಂದರಿಂದಲೇ ಮನುಷ್ಯನಿಗೆ ಕ್ರಿಮಿಕೀಟ, ನಿಸರ್ಗಕೋಪ ಮುಂತಾದುವುಗಳಿಗಿಂತ ಕ್ಲೇಶಕಾರಕ ಶತ್ರುವು ಮನುಷ್ಯನೆ ಆಗಿರುವನು ಎಂಬ ಮಾತು ನಿಜವಾಗಿಯುಸತ್ಯ.

ಮಗುವಿಗೆ ತನ್ನ ಸುತ್ತಮುತ್ತಲಿನ ವಿಷಯವನ್ನು ತಿಳಿಯಬೇಕೆಂಬ ಕುತೂಹಲವಿರುತ್ತದೆ. ಈ ವಿಷಯವನ್ನು ತಿಳಿಯಲು ತಂದೆ-ತಾಯಿಗಳನ್ನು ಪದೇ ಪದೇ ಪ್ರಶ್ನಿಸುತ್ತಾರೆ. ಈ ಪ್ರಶ್ನೆಗೆ ಅವರು ಸಮರ್ಪಕವಾದ ಉತ್ತರವನ್ನು ನೀಡ ಬೇಕಾಗುತ್ತದೆ. ನಮ್ಮ ಸಮಾಜದಲ್ಲಿ ತಂದೆ-ತಾಯಿಗಳ ತಿಳುವಳಿಕೆಯ ಮಟ್ಟವೇ ಕಡಿಮೆ. ಅದಲ್ಲದೆ ಕೆಲವು ವಿಷಯಗಳನ್ನು ಕುರಿತು ಮಾತನಾಡಲು ಸಂಕೋಚ. ಆದುದರಿಂದ ಅಜ್ಞಾನದಿಂದಲೋ ಅಥವಾ ಸಂಕೋಚದಿಂದಲೋ ಅವರು ಮಕ್ಕಳಿಗೆ ಸತ್ಯವನ್ನು ಹೇಳಲು ಹಿಂಜರಿಯುವರು. ಕೆಲವು ಉಪಾಧ್ಯಾಯರು ಸಹ ಹೀಗೆಮಾಡುವುದು ಕಂಡುಬರುತ್ತದೆ. ಸತ್ಯಹೇಳಿದರೆ ಮಗುವಿನಲ್ಲಿ ಅನುಮಾನ ಹೋಗುವುದು. ಇಲ್ಲದಿದ್ದರೆ ಇದರಲ್ಲಿ ಏನೋ ಗೂಢಾರ್ಥವಿದೆಯೆಂದು ಊಹಿಸಿ, ಇದರಿಂದ ಮಕ್ಕಳವರ್ತನೆಯಲ್ಲಿ ಒಂದು ಕೆಟ್ಟ ಪರಿಣಾಮವುಂಟಾಗುವುದು.

ಈ ಎಲ್ಲ ಕಾರಣಗಳಿಂದ ಸಮಾಜದ ಮಧ್ಯದಲ್ಲಿ ಬೆಳೆಯುತ್ತಿರುವ ಮಗುವಿಗೆ ಪದೇ ಪದೇ ಬಯ್ದು ಅವರಿಗೆ ನಮ್ಮಲ್ಲಿ ಭಯ ಕೋಪ ದ್ವೇಷ ಮುಂತಾದ ಭಾವೋದ್ರೇಕಗಳುಂಟಾಗದಂತೆ ನೋಡಿಕೊಳ್ಳಬೇಕು. ಅವರನ್ನು ಚಿಕ್ಕವರೆಂದು ಉದಾಸೀನಮಾಡದೆ ಅವರ ಬುದ್ಧಿ-ವಿವೇಕಗಳನ್ನು ಅಭಿವೃದ್ಧಿಗೊಳಿಸಬೇಕು. ಹೀಗೆ ಚಿಕ್ಕಂದಿನಿಂದಲೂ ಜಾಗರೂಕತೆಯಿಂದ ಮಕ್ಕಳನ್ನು ಬೆಳೆಸಿದರೆ ಮುಂದೆ ಸಮಾಜದ ಏಳಿಗೆಗೆ ನೆರವಾಗುವುದರಲ್ಲಿ ಸಂದೇಹವಿಲ್ಲ.

# ಶಕ್ತಿ ವಿಶಿಷ್ಟಾದ್ವೈತ.

( ಲೇ:– ಧಾರವಾಡ ನವಕಲ್ಯಾಣಮಠದ ಶ್ರೀ ಕುಮಾರಸ್ವಾಮಿಗಳು.)

ಮಾನವನಲ್ಲಿ ಮನನ ಶಕ್ತಿಯು ಜಾಗ್ರತವಾದಂದಿನಿಂದ ಅವನು ತನ್ನ ವಿಷಯವಾಗಿ ತನ್ನ ಸುತ್ತುಮುತ್ತಿನ ಸೃಷ್ಟಿಯ ವಿಷಯವಾಗಿ ಹಾಗು ಇವಕ್ಕೆ ಆಧಾರಭೂತವಾದ ವಸ್ತುವಿನ ವಿಷಯವಾಗಿ ಅನೇಕ ಬಗೆಯಾಗಿ ಚಿಂತನೆ ಮಾಡುತ್ತ ವಿವಿಧ ಸಿದ್ಧಾಂತಗಳನ್ನು ಕಾಣುತ್ತ ಬಂದಿರುವನು. ಮಾತ್ರವಲ್ಲ ಸಾಧನೆಯೊಂದರ ನೆರವಿನಿಂದ ತಾನು ಕಂಡ ಸಿದ್ಧಾಂತಗಳ ನಿಲವನ್ನು ಸಂಪಾದಿಸಿಕೊಳ್ಳಲೂ ಹವಣಿಸುತ್ತ ಬಂದಿರುವನು. ಸೃಷ್ಟಿಯು ಒಂದಂಗವೆನಿಸಿದ ತಾನು ಸೃಷ್ಟಿಕರ್ತನನ್ನು ಸೇರುವ ಮಾರ್ಗವನ್ನು ತಿಳಿಸುವ ಅವನ ಅಭಿಪ್ರಾಯಕ್ಕೆ ಮತವೆಂತಲೂ ಸೃಷ್ಟಿಕರ್ತನನ್ನು ಕಾಣುವ ಅವನ ದೃಷ್ಟಿಗೆ ದರ್ಶನವೆಂತಲೂ ಹೆಸರುಂಟು. ಮತದ ಮಾತುಗಳಲ್ಲಿ ಜಗತ್ತು, ಜೀವ, ದೇವ ಮತ್ತು ಇವುಗಳಲ್ಲಿರುವ ಪರಸ್ಪರ ಸಂಬಂಧದವಿವೇಚನೆಯು ಅಡಕವಾಗುತ್ತದೆ. ಮತಾಚಾರಗಳಿಗೆ ಪೂರ್ವ ಭಾವಿಯಾಗಿ ಅವುಗಳಿಗೆ ಬೆಂಬಲವಾಗಿರುವ ಸಿದ್ಧಾಂತಗಳಿಗೆ ದರ್ಶನವೆಂಬ ಹೆಸರು. ಮತದರ್ಶನ ಸಿದ್ಧಾಂತಗಳಲ್ಲಿ ಹೀಗೆ ಒಂದು ನಿಕಟವಾದ ಸಂಬಂಧವಿರುತ್ತದೆ. ನಮ್ಮನಾಡು ಇಂತಹ ಅನೇಕ ಮತ ದರ್ಶನ ಸಿದ್ಧಾಂತಗಳ ಬೀಡು. ಯಾಕೆಂದರೆ ಬಹು ಪುರಾತನ ಕಾಲದಿಂದ ಇಲ್ಲಿ ತತ್ವ ಜಿಜ್ಞಾಸೆಗೆ ಮೊದಲಾಗಿ ಆ ತತ್ವಗಳ ಬಗೆಗೆ ವಿವಿಧವಾದ ವಿಚಾರಗಳನ್ನು ನಮ್ಮ ಪೂರ್ವಜರು ಮಂಡಿಸಿದ್ದಾರೆ. ಶೈವ ಶಾಕ್ತ ವೈಷ್ಣವ ಮೊದಲಾದ ಮತಗಳೂ ಅವುಗಳ ಭೇದ ಪ್ರಭೇದಗಳೂ ಷಡ್ ದರ್ಶನಗಳೂ ಅದ್ವೈತ, ದ್ವೈತ, ವಿಶಿಷ್ಟಾದ್ವೈತ ಶಕ್ತಿ, ವಿಶಿಷ್ಟಾದ್ವೈತ ಸಿದ್ಧಾಂತಗಳೂ ಆ ತತ್ವದ ನಾನಾ ಪ್ರಕಾರದ ವಿವರಣೆಯನ್ನು ಮಾಡುತ್ತವೆ. ಈ ವಿವರಣೆಯಲ್ಲಿ ಒಂದೊಂದು ಮತ ದರ್ಶನ ಸಿದ್ಧಾಂತಕ್ಕೆ ಒಬ್ಬೊಬ್ಬ ಕಾರಣ ಪುರುಷನ ಹೆಸರು ಹೇಳುವುದುಂಟು. ಇವುಗಳ ಪ್ರತಿಕ್ರಿಯೆಯು ಪೂರ್ವದ ಅನೇಕ ಗ್ರಂಥಗಳಲ್ಲಿ ಹೆಣೆದುಕೊಂಡಿದೆ. ಸ್ವತಂತ್ರವಾಗಿ ಆಯಾ ಪ್ರತಿಕ್ರಿಯೆಯನ್ನು ಎತ್ತಿ ತೋರಿಸುವ ಗ್ರಂಥಗಳೂ ಅನೇಕವಾಗಿವೆ. ವೇದಾಗಮೋಪನಿಷತ್ತುಗಳು ಪ್ರತಿಕ್ರಿಯೆಯನ್ನು ವಿವರಿಸುವಲ್ಲಿ ಮತೀಯರಿಗೆ ದಾರ್ಶನಿಕರಿಗೆ ಸಿದ್ಧಾಂತಗಳಿಗೆ ಪ್ರಬಲವಾದ ಪ್ರಮಾಣಗಳಾಗಿರುತ್ತವೆ.

## ಮೂಲವಸ್ತು

ಮೂಲ ವಸ್ತುವಿನ ಸ್ವರೂಪವನ್ನು ವಿವರಿಸುವ ಕಾಲಕ್ಕೆ ಅದು "ಒಂದು" ಎಂಬುದಾಗಿ ಕೆಲವು ವಾಕ್ಯಗಳೂ "ಎರಡು" ಎಂಬುದಾಗಿ ಹಲವು ವಾಕ್ಯಗಳೂ



"ಮೂರು" ಎಂಬುದಾಗಿ ಹಲಕೆಲವು ವಾಕ್ಯಗಳೂ ಪೂರ್ವದ ಗ್ರಂಥಗಳಲ್ಲಿ ದೊರೆಯುತ್ತವೆ. ಅದ್ವೈತಿಗಳು ಸರ್ವಂಖಲ್ವಿದಂ ಬ್ರಹ್ಮ, ಬ್ರಹ್ಮಂ ಸತ್ಯಂ ಜಗನ್ಮಿಥ್ಯಾ ಎಂದು ತಿಳಿಸಿ ಕೇವಲ ಬ್ರಹ್ಮ ತತ್ವವೊಂದನ್ನೇ ಒಪ್ಪುತ್ತಾರೆ. ದ್ವೈತಿಗಳು ಜೀವಾತ್ಮ ಪರಮಾತ್ಮ ಎಂಬ ಎರಡು ನಿರಂತರವಾದ ತತ್ವಗಳನ್ನು ನಂಬಿ ಜೀವ– ಪರಮ್ಮರಲ್ಲಿ, ಜೀವ ಜಡದಲ್ಲಿ, ಜೀವ ಜೀವರಲ್ಲಿ, ಜಡ ಪರವರಲ್ಲಿ ಜಡ ಜಡದಲ್ಲಿ ಭೇದವಿದೆಯೆಂದು ಪಂಚ ಭೇದಗಳನ್ನು ಮನ್ನಿಸುತ್ತಾರೆ. ವಿಶಿಷ್ಟಾದ್ವೈತಿಗಳು ಚಿತ್ ಅಚಿತ್ ಈಶ್ವರ ಎಂಬುದಾಗಿ ಮೂರು ತತ್ವಗಳಿವೆಯೆಂದು ಭಾವಿಸುತ್ತಾರೆ. ಚಿತ್ ಎನಿಸಿದ ಜೀವ ಅಚಿತ್ ಎನಿಸಿದ ಪ್ರಗತಿ ಇವು ಪ್ರತ್ಯೇಕವಾಗಿರದೆ ದಾಳಿಂಬ ಹಣ್ಣಿನ ಕಾಳಿನಂತೆ ಈಶ್ವರನಲ್ಲಿ ಸರ್ವದಾ ಸೇರಿರುತ್ತವೆ, ಎಂದು ಹೇಳಿ ಚಿದಚಿತ್ತಿನಿಂದ ಕೂಡಿದ ಪರಮಾತ್ಮ ಒಂದೆಯಾಗಿದೆಯೆಂದು ಕೊನೆಗೆ ಸಮನ್ವಯಗೊಳಿಸುತ್ತಾರೆ. ಮಾಧುರ್ಯಧಾವಳ್ಯಗಳು ಹಾಲಿನಲ್ಲಿ ಅಡಗಿ ಅದರಲ್ಲಿ ಪ್ರತ್ಯೇಕವಾಗಿ ತೋರದಿರುವಂತೆ ಚಿತ್ ಅಚಿತ್‌ಗಳನ್ನು ಗರ್ಭೀಕರಿಸಿಕೊಂಡು ಪರಮಾತ್ಮನ ನಿಲವು ಎಲ್ಲವನ್ನು ಒಳಗೊಂಡಿರುತ್ತದೆ. ಐತಿಹಾಸಿಕ ದೃಷ್ಟಿಯಿಂದ ಸಿದ್ಧಾಂತಗಳ ನಿರೂಪಣೆಯನ್ನು ಮಾಡುವಾಗ ಅದ್ವೈತಕ್ಕೆ ಶ್ರೀ ಶಂಕರಾಚಾರ್ಯರೂ (ಕ್ರಿ. ಶ. ೮೦೦) ದ್ವೈತಕ್ಕೆ ಶ್ರೀ ಮನ್ಮಧ್ವಾಚಾರ್ಯರೂ (ಕ್ರಿ. ಶ. ೧೨೦೦) ಮತ್ತು ವಿಶಿಷ್ಟಾದ್ವೈತಕ್ಕೆ ಶ್ರೀ ರಾಮಾನುಜಾಚಾರ್ಯರೂ (ಕ್ರಿ. ಶ. ೧೩೦೦) ಮೊದಲಿಗರೆಂದು ಪ್ರಖ್ಯಾತರಾಗಿದ್ದಾರೆ. ಮೋಕ್ಷೋಪಲಬ್ಧಿಯೇ ಈ ಮೂರು ಸಿದ್ಧಾಂತಗಳ ಮೂಲ ಗುರಿಯಾಗಿದೆ.

## ವಿಶಿಷ್ಟಾದ್ವೈತ

ಈ ಮೂರು ಸಿದ್ಧಾಂತಗಳಿಗಿಂತ ಭಿನ್ನವಾದ ಸಿದ್ಧಾಂತವೊಂದು ನಮ್ಮೀ ನಾಡಿನಲ್ಲಿ ವಿಶೇಷವಾಗಿ ಕನ್ನಡ ನಾಡಿನಲ್ಲಿರೂಢವಾಗಿರುತ್ತದೆ. ಶಕ್ತಿ ವಿಶಿಷ್ಟಾದ್ವೈತವೆನಿಸಿದ ಈ ಸಿದ್ಧಾಂತವು ಯಾರಿಂದಲ್ಲಿ ಯಾವ ಕಾಲಕ್ಕೆ ಹುಟ್ಟಿತೆಂದು ಗೊತ್ತುಪಡಿಸಲಿಕ್ಕೆ ಸಾಕಷ್ಟು ಸಾಧನೆಸೌಕರ್ಯಗಳಿಲ್ಲ. ಈ ಸಿದ್ಧಾಂತವನ್ನು ಕ್ರಿ. ಶ. ೮ ನೆಯ ಶತಮಾನದಲ್ಲಿದ್ದಿರಬಹುದಾದ ನೀಲಕಂಠಾಚಾರ್ಯ ಎಂಬವನು ಪ್ರಸ್ಥಾಪಿಸಿದನೆಂದು ಹೇಳಲಾಗುತ್ತದೆ. ರೇಣುಕಾಚಾರ್ಯರನ್ನು ಈ ಸಿದ್ಧಾಂತದ ಆಚಾರ್ಯರೆಂದು ತಿಳಿಸಲಾಗುತ್ತದೆ. ಆದರೆ ಇವು ಇನ್ನೂ ಸಂಶೋಧಿಸಬೇಕಾದ ವಿಷಯಗಳು ಈ ಸಿದ್ಧಾಂತಕ್ಕೆ ಶಿವಾದ್ವೈತ, ದ್ವೈತಾದ್ವೈತ ವಿಶೇಷಾದ್ವೈತ, ಭೇದಾಭೇದಾತ್ಮಕ ವಿಶೇಷಾದ್ವೈತ ಈ ಮುಂತಾದ ಪರ್ಯಾಯ ನಾಮಗಳುಂಟು. ಶಿವಯೋಗಿ ಶಿವಾಚಾರ್ಯ (ಕ್ರಿ. ಶ. ೧೩೦೦) ನೀಲಕಂಠ ಶಿವಾಚಾರ್ಯ (೧೪೦೦) ಶ್ರೀಪತಿ ಪಂಡಿತ (೧೪೦೦) ಮಗ್ಗೆಯ ಮಾಯಿದೇವ (೧೪೩೦) ಮರಿತೋಂಟದಾರ್ಯ (೧೭೦೦) ಮೊದಲಾದವರು ಸಿದ್ಧಾಂತದ ವಿವರಣೆಯನ್ನು ಸಂಸ್ಕೃತದಲ್ಲಿ ನಿರೂಪಿಸಿವರು. ತಮ್ಮ ಸಿದ್ಧಾಂತ ಪ್ರತಿಪಾದನೆಗೆ ಆಧಾರವಾಗಿ ಶೈವಾಗಮಗಳ ಉತ್ತರ ಭಾಗ, ಉಪನಿಷತ್ತು, ಶೈವಭಾಗವನ್ನು ನಿರ್ದೇಶಿಸುವ ಇತಿ-

ಹಾಸ ಪುರಾಣ ಇವುಗಳಿಂದ ಪ್ರಮಾಣ ವಾಕ್ಯಗಳನ್ನು ಉದಾಹರಿಸಿದ್ದಾರೆ. ಅಳ್ವರರ್ ಎಂಬ ೧೨ ಜನ ಮಹಾ ಜ್ಞಾನಿಗಳು ಬೋಧಿಸಿದ, ಜ್ಞಾನ ಭಾಗವನ್ನೇ ನಿರೂಪಿಸುವ, ತ್ರೈವರ್ಣಿಕರಲ್ಲದೆ, ಸರ್ವರಿಗೂ ಅಧ್ಯಯನ ಯೋಗ್ಯವಾದ ದ್ರಾವಿಡ ಭಾಷೆಯ ೧೪೦೦೦ ದಿವ್ಯ ಪ್ರಬಂಧಗಳಿಂದ ಸ್ಫೂರ್ತಿಯನ್ನು ಪಡೆದು ಬೆಳೆದು ಬಂದ ವಿಶಿಷ್ಟಾದ್ವೈತದಂತೆ ಈ ಸಿದ್ಧಾಂತವೂ ೧೨ ನೆಯ ಶತಮಾನದಲ್ಲಿಯ ಶಿವಶರಣರ ಅನುಭಾವಯುಕ್ತ ಕನ್ನಡ ವಚನ ವಾಙ್ಮಯದಿಂದ ಸ್ಫೂರ್ತಿಯನ್ನು ಪಡೆಯಿತೆಂದು ತಿಳಿಯಬಹುದು.

ಶಿವಾಗಮಗಳಲ್ಲಿ ವ್ಯಕ್ತವಾದ ಶೈವ ಸಿದ್ಧಾಂತದಿಂದ ಪರಶಿವನೇ ಪ್ರಕೃತಿ ಪುರು-
ಷರ ನಿರ್ಮಾಣಕನೆಂದು ಗೊತ್ತಾಗುವದು. ಇದರಿಂದ ಈ ಸಿದ್ಧಾಂತವು ಪ್ರಕೃತಿ-
ಪುರುಷ-ಪರಶಿವ- ಎಂಬ ಮೂರು ತತ್ವಗಳನ್ನು ಒಪ್ಪಿಕೊಳ್ಳುವದೆಂದು ಹೇಳಬಹುದು.
ಪ್ರಕೃತಿಯ ಸಂಗವನ್ನು ಪರಿಹರಿಸಿಕೊಂಡು ಪುರುಷನು ಪರಶಿವನಲ್ಲಿ ತಾದಾತ್ಮ್ಯ ಪಡೆ-
ಯುವದೇ ಶೈವ ಧರ್ಮದ ಪರಮಾದರ್ಶವಾಗಿಹುದು. ಈ ತತ್ವಗಳನ್ನೇ ಪ್ರಾಮುಖ್ಯ
ವಾಗಿಟ್ಟುಕೊಂಡಿದ್ದ ಶೈವ ಧರ್ಮವು ಕಾಲಗತಿಯಲ್ಲಿ ನಾಲ್ಕು ಪಂಗಡಗಳಿಂದ
ಪ್ರಗತಿಯನ್ನು ಪಡೆದಿದ್ದರೂ ಮೂಲ ತತ್ವದ ವಿಷಯವಾಗಿ ಅಲ್ಲಿ ಭಿನ್ನ ಅಭಿಪ್ರಾಯವಿಲ್ಲ.
ಗುಜರಾತದ ಲಕುಲೀಶ ಪಾಶುಪತವು ಪರಶಿವನ ಪಶುಪತಿಯೆಂದು ಹೇಳಿ ಪಶು ಪಾಶ
ಪತಿ ತತ್ವಗಳನ್ನು ಮುಂದು ಮಾಡಿದನು. ತಮಿಳು ನಾಡಿನ ಶೈವ ಸಿದ್ಧಾಂತವು ಆಣವ
ಮಾಯಾ ಕರ್ಮವೆಂಬವನ್ನು ತಿಳಿಸಿ ಪುರುಷ-ಪರಶಿವರ ಹೊಂದಿಕೆಗಾಗಿ ಮಲತ್ರಯದ
ನಿವಾರಣೆಯನ್ನು ಸೂಚಿಸಿತು. ಕಾಶ್ಮೀರದ ಪ್ರತ್ಯಭಿಜ್ಞಾ ಎಂಬ ಶೈವ ಧರ್ಮಕ್ಕೆ ಪುರು
ಷನ ಪ್ರಗತಿಯಲ್ಲಿ ಅಡ್ಡಿವಾಗಿ ನಿಂತು ಪಂಚ ಕಂಚುಕಗಳೆಂಬ ಐದು ದೋಷಗಳ
ಪರಿಹಾರವೇ ಪ್ರಾಮುಖ್ಯವಾದ ಗುರಿಯಾಯಿತು. ಕನ್ನಡನಾಡಿನ ವೀರಶೈವವು ಸ್ಥಿರ
ರೂಪನೂ ಚರರೂಪನೂ ಆದ ಪರಶಿವನೇ ಗೊತ್ತಿನ ಗುರಿಯೆಂದು ಭಾವಿಸಿತು. ಪರಶಿ-
ವನು ಪುರುಷರ ಕರ್ಮಗಳಿಗೆ ಸಂಬಂಧ ಪಡೆದವನೆಂದು ಪಾಶುಪತ ಧರ್ಮವೂ ಪರಶಿ-
ವನ ಅಪ್ಪಣೆಯಿಂದಲೇ ಕರ್ಮಲೋಪವಾಗಲಿ ಕರ್ಮ ನಿರ್ಮೂಲನವಾಗಲಿ ಪುರುಷನಿಗೆ
ಒದಗುವದೆಂದು ತಮಿಳು ಶೈವ ಸಿದ್ಧಾಂತವೂ, ಮಹೇಶ್ವರನು ತನ್ನ ಸಂಕಲ್ಪ ಶಕ್ತಿ-
ಯಿಂದಲೇ ಸೃಷ್ಟಿಯನು ನಿರ್ಮಿಸಿ ಲೀಲೆಯನಾಡುವನೆಂದು ಕಾಶ್ಮೀರ ಶೈವವು ತಿಳಿ
ಯುತ್ತದೆ. ವೀರಶೈವ ಧರ್ಮವು ಈ ತತ್ವಗಳನ್ನು ಮನ್ನಿಸುವದಲ್ಲದೆ ಪ್ರತ್ಯಭಿಜ್ಞಾ ಸಿದ್ಧಾ
ಂತಕ್ಕಿಂತ ಮುಂದೆ ಹೋಗಿ ಪರಶಿವ ಸಂಕಲ್ಪಶಕ್ತಿಯು ಅಥವಾ ಚಿತ್ ಶಕ್ತಿಯು ಪರಶಿ
ವನೊಡನೆ ಅವಿನಾಭಾವ ಸಂಬಂಧದಿಂದ ಒಡವೆರೆದಿದೆ. ಪುರುಷ ಪ್ರಕೃತಿಗೆಲ್ಲ ಪರಶಿವನ
ಈ ಚಿತ್ ಪ್ರಭೆಯೇ ತಳಹದಿಯಾಗಿದೆ ಎಂದು ತಿಳಿಸುವದು. ಪ್ರಕೃತಿ, ಪುರುಷ
ಪುರುಷ ಪರಬ್ರಹ್ಮ ತತ್ವಗಳನ್ನು ಮೂರೂ ಶೈವ ಪಂಗಡಗಳು ಒಪ್ಪಿಕೊಂಡರೂ ವೀರ
ಶೈವದಂತೆ ಪರಬ್ರಹ್ಮನ ಸಂಕಲ್ಪ ಶಕ್ತಿಗೆ ಮಾತ್ರ ಪ್ರಾಧಾನ್ಯವನ್ನು ನೀಡಲಿಲ್ಲ. ಶಾಕ್ತಾ
ಗಮಗಳು ಶಕ್ತಿಗೆ ಮಹತ್ವದ ಸ್ಥಾನ ಕೊಡುತ್ತಿದ್ದರೂ ಅಲ್ಲಿ ಶಿವನಿಗಿಂತ, ಶಕ್ತಿಗೇ ಆಧಿ



ಕ್ಯವುಂಟು. ಸೃಷ್ಟಿಯ ವಿಸ್ತಾರವಾಗುವದು ಅಲ್ಲಿ ಶಿವನಿಂದಲ್ಲ, ಶಕ್ತಿಯಿಂದ. ಶಕ್ತಿಯು ಶಿವನ ಅಂಗವೆಂದು ಹೇಳಿ ವೀರಶೈವ ಸಿದ್ಧಾಂತವು ಸತ್ಯ ಸಂಕಲ್ಪ ಶಕ್ತಿಗಳಲ್ಲಿ ಸಮತೂಕವನ್ನು ಎತ್ತಿಹಿಡಿಯುತ್ತದೆ. ಈ ವಿವರಣೆಯಿಂದ ವೀರಶೈವ ಪ್ರತಿಪಾದಿತ ಶಕ್ತಿ ವಿಶಿ-ಷ್ಟಾದ್ವೈತವು ಪ್ರಕೃತಿ ಪುರುಷ ಪರಶಕ್ತಿ ಪರಶಿವ ಎಂಬ ನಾಲ್ಕು ತತ್ವಗಳನ್ನು ಬಿತ್ತರಿಸುವದೆಂದು ಗೊತ್ತಾಗುವದು. ಪ್ರಕೃತಿಯೂ ಶಕ್ತಿಯೇ ಆದರೆ ಅದು ಜಡವೆನಿಸಿಹುದು. ಅದರ ಸಂಬಂಧದಿಂದ ಪುರುಷನೂ ಜಾಡ್ಯಕ್ಕೊಳಗಾಗಿಹನು. ಪರಶಕ್ತಿಯು ಮಾತ್ರ ಚೈತನ್ಯಸೂಚಕವಾಗಿಹುದು. ಪರಶಕ್ತಿಯುತ ಪರಶಿವನು ಚೈತನ್ಯಾತ್ಮಕನಾಗಿಹನು. ಪರಶಿವನಂತೆ ಪುರುಷನೂ ಶಕ್ತಿಯಿಂದೊಡಗೂಡಿದವನಿದ್ದರೂ ಜಡ ಚೈತನ್ಯಗಳಿಂದ ಅವರ ವಿಶಿಷ್ಟತೆಯ್ನು ಮನಗಾಣಲಾಗದು. ಶಕ್ತಿ ವಿಶಿಷ್ಟಾದ್ವೈತದ ನಿರ್ವಚನ ಮಾಡುವಾಗ ಸಿದ್ಧಾಂತಕಾರರು ಅತಿ ಸ್ಪಷ್ಟವಾಗಿ ವಿವರಿಸಿರುವರು (ಶಕ್ತಿಶ್ಚ ಶಕ್ತಿಶ್ಚ ಶಕ್ತಿ। ತಾಭ್ಯಾಂ ವಿಶಿಷ್ಟಾ ಜೀವೇಶಾ ತಯೋರ್ದ್ವೈತಂ। ಶಕ್ತಿ ವಿಶಿಷ್ಟಾದ್ವೈತಂ॥

## ಶೈವಾಗಮ

ಈ ಪ್ರಪಂಚದ ಮೂಲ ವಸ್ತುವನ್ನು ವೀರಶೈವರು " ಶಿವ " " ಲಿಂಗ " " ಸ್ಥಲ" ಎಂದು ಬಗೆಬಗೆಯಾಗಿ ಬಣ್ಣಿಸಿರುವರು. ಶೈವಾಗಮಗಳು " ಶೇರಿತೇ ಇನಿ ಶಿವಃ " ಎಂದು ಹೇಳುತ್ತಿವೆ. ತೋರುವ ಈ ತೋರಿಕೆಯೆಲ್ಲ ಪರವಸ್ತುವಿನಲ್ಲಿ ಸೇರುವುದರಿಂದಲೆ ಅದು " ಶಿವ " ಎಂಬ ನಾಮವನ್ನು ಪಡೆಯಿತು. ಶಿವನು ತನ್ನದೇ ಅದ ತನಗಿಂತ ಭಿನ್ನವಲ್ಲದ ಒಂದು ಪ್ರಕಾಶಶಕ್ತಿಯಿಂದ ಕೂಡಿದ್ದಾನೆ ಮತ್ತು ಆ ಶಕ್ತಿಯಿಂದ ಕೂಡಿಹನೆಂಬ ಸ್ವವಿಮರ್ಶೆಯೂ ಅವನಿಗುಂಟು. ಸೂರ್ಯ, ರತ್ನ, ವಿದ್ಯುದ್ದೀಪ ಇತ್ಯಾದಿಗಳಿಗೆ ಸ್ವಯಂಪ್ರಭೆಯಿದ್ದರೂ ಆ ಪ್ರಭೆಯ ಅರಿವ ಸ್ವವಿಮರ್ಶೆಯು ಅವುಗಳಿಗಿಲ್ಲ. ಆದುದರಿಂದ ಅವು ಜಡರೂಪವಾಗಿರುವವೆಂದು ಹೇಳಲಾಗುತ್ತಿದೆ. ಸ್ವಪ್ರಕಾಶದ ಸ್ವವಿಮರ್ಶೆಗಾಗಿ ಶಿವನು ಚೈತನ್ಯಾತ್ಮಕವಾಗಿದ್ದಾನೆ. ಈ ಆತ್ಮ ವಿಮರ್ಶೆಯೇ ಪ್ರಕಾಶ ವಿಮರ್ಶೆಯೇ ಪರಾಸಂವಿತ್ ( ಪರಪೂರ್ಣವಾದ ಅರಿವು ) ಎಂಬ ಸಂಜ್ಞೆಯುಳ್ಳ ಪರಶಕ್ತಿಯಾಗಿದೆ. ಕಾರಮೇಘದೊಳಗಣ ಮಿಂಚಿನಂತೆ, ನೀರೊಳಗಣ ಕಿಚ್ಚಿನಂತೆ, ಫಲ. ರಸದೊಳಗಣ ನವರುಚಿಯಂತೆ, ಶಶಿಯೊಳಗಣ ತಣ್ಪಿನಂತೆ, ಮರೀಚಿಯೊಳಗಣ ಬಿಸಿಲಿನಂತೆ, ಆಲಿಯೊಳಗಣ ತೇಜದಂತೆ, ಶಿಲೆಯೊಳಗಣ ಪಾವಕನಂತೆ, ಉದಕದೊಳಗಣ ಪ್ರತಿಬಿಂಬದಂತೆ, ಚಿನ್ನದೊಳಗಣ ಬಣ್ಣದಂತೆ, ಬೀಜದೊಳಗಣ ವೃಕ್ಷದಂತೆ, ನನೆಯೊಳಗಣ ವೃಕ್ಷದಂತೆ, ನನೆಯೊಳಗಣ ಪರಿಮಳದಂತೆ, ಕನ್ಯೆಯೊಳಗಣ ಸ್ನೇಹದಂತೆ, ಹಸುಳೆಯೊಳಗಣ ಸ್ವಪ್ನದಂತೆ, ಶಬ್ದದೊಳಗಣ ನಿಶ್ಶಬ್ದದಂತೆ, ಉಸಿರೊಳಗಣ ಚೈತನ್ಯದಂತೆ" ಶಿವಶಕ್ತಿಯರ ಅವಿನಾಭಾವ ಸಂಬಂಧವಿದೆ ಎಂದು ವಚನಕಾರರು ವಿವರಿಸಿರುವರು. ಅವರು ಪಿಂಡಸ್ಥಲದ ತಮ್ಮ ವಚನಗಳಲ್ಲಿ ಸೂಚಿಸಿರುವ

ಈ ಶಕ್ತಿಯು ಸಾಂಖ್ಯರ ತ್ರಿಗುಣಾತ್ಮಕ ಪ್ರಕೃತಿಯೂ ಅಲ್ಲ, ಅದ್ವೈತಿಗಳ ಅನಿರ್ವಚನೀಯ ಮಾಯೆಯೂ ಅಲ್ಲ ಎಂಬುದು ಸ್ಪಷ್ಟವಾಗಿದೆ.

## ಲಿಂಗ ಸ್ವರೂಪ

ವೀರಶೈವ ಅನುಭಾವಿಗಳು ಪರಶಿವನಿಗೆ ಲಿಂಗ ಎಂದು ಸಂಬೋಧಿಸಿರುವರು "ಶಿವಏವ ಸ್ವಯಂ ಲಿಂಗಂತಿಇಲಿಂಗಸ್ಯವೈ ಭವಂ" (ಅನುಭವಸೂತ್ರ ೩) ಶೈವಾಗಮುಗಳಲ್ಲಿ ಶಿವನು ಸದ್ರೂಪನೆಂದೂ ಶಕ್ತಿಯುಚಿದ್ರೂಪನೆಂದೂ ವರ್ಣಿತವಾಗಿವೆ. ಆದ್ದರಿಂದ ಶಿವಶಕ್ತಿಯರನ್ನ ಸ್ತ್ರೀಪುರುಷರೆಂದು ಭಾವಿಸುವದು ಸಾಧುವಲ್ಲ. ಲಿಂಗವು ಪರವಸ್ತುವಿನ ಸದ್ರೂಪ ಚಿದ್ರೂಪಗಳನ್ನು ಒಂದುಗೂಡಿಸುವ ತತ್ವವಾಗಿದೆ ಲಿಂಗಂ-ಶೈವಯಿದಂ ಸಾಕ್ಷಾತ್ ಶಿವಶಕ್ತಿ ಭಯಾತ್ಮಕಂ ಎಂದು ಸೂಕ್ಷಾಗಮುವು (೪-೮) ಹೇಳುತ್ತಿದೆ ಚರಾಚರಾತ್ಮಕವಾದ ಎಲ್ಲವೂ ಲಿಂಗದಿಂದ ಉದಯಿಸಿ ಲಿಂಗದಲ್ಲಿ ಬೆಳೆದು ಲಿಂಗದಲ್ಲಿ ಉಳಿದುಕೊಳ್ಳುವದು. "ಲೀಯತೆ ಗಮ್ಯತೆ ಯತ್ರ ಸರ್ವಃ ಚರಾಚರಂ ತದೇತಂ ಲಿಂಗಂಭಿತ್ಯುಕ್ತಂ ಲಿಂಗತತ್ವ ಪರಾಯಣ" ಎಂದು ಮಗ್ಗಿಯ ಮಾಯಿದೇವನು ತಿಳಿಸುವನು. ಶಿವಪುರಾಣದ ವಿದ್ಯೇಶ್ವರ ಸಂಹಿತೆಯಲ್ಲಿಯೂ ಸಹ ವಿನಾರ್ಥಗಮಕಂ ಚಿಹ್ನಂ ಲಿಂಗ ಮಿತ್ಯಭಿಧಾಯತೆ ಎಂದು ಹೇಳಿದ ಇದರಿಂದ ಉತ್ಪತ್ತಿ ಸ್ಥಿತಿ ಲಯಗಳಿಗೆ ಯಾವುದು ಕಾರಣವಾಗಿದೆಯೋ, ಯಾವುದು ಎಲ್ಲವನ್ನೂ ತನ್ನಲ್ಲಿ ಗರ್ಭೀಕರಿಸಿಕೊಂಡು ಆದಕ್ಕೆಲ್ಲ ಆಧಾರಭೂತವಾಗಿದೆಯೋ ಅದು ಲಿಂಗ ಎಂಬುದು ಸ್ಪಷ್ಟವಾಗುವದು. ಮತ್ತು ಶಿವ ಶಕ್ತಿಯರ ನಡುವೆ ಬೆಸುಗೆಯೊಂದರ ಭ್ರಾಮಕಕಲ್ಪನೆಯನ್ನು ಕೆಡಸಿ ಅದರಲ್ಲಿಯು ಒಂದು ಆವಿರಳವಾದ ಬೆಸುಗೆಯನು ಲಿಂಗ ಪದವು ವ್ಯಕ್ತಗೊಳಿಸುವದೆಂದೂ ಸೂಚಿತವಾಗುವದು.

ವೀರಶೈವ ಆಚಾರ್ಯರು ಪರಶಿವನಿಗೆ ಪರಬ್ರಹ್ಮವೆಂದೂ ಕರೆದಿರುವರು. ತೋರಿಕೆಯೆಲ್ಲದರ ಗತಿ ಸ್ಥಿತಿಗೆ ಕಾರಣವಾಗಿ ಪರಶಿವನಿಹುನು. ಮಹಾದಾದಿ ತತ್ವಗಳಿಂದ ಲಕ್ಷ್ಯವಾದ ಈ ಸೃಷ್ಟಿಗೆಲ್ಲ ಆದಿಯಾಧಾರವಾಗಿರುವವನು ಈ ಪರಶಿವನೇ. ಜಡ ಚೈತನ್ಯ ಸುಷ್ಟಿಯ ಅಳಿಮೆಉಳಿಮೆಗಳಿಗೆ ಈ ಪರಶಿವನಲ್ಲದೆ ಬೇರೆ ಆಶ್ರಯವಿಲ್ಲ. ವಿಶ್ವವೆಲ್ಲ ತೋರಿ ಅಡಗುವದು ಈ ಪರಶಿಲಿಂಗದಿಂದ. ಈ ಪರಶಿವನಲ್ಲಿ ಸ್ಥಿತಿಲಯಗಳಿಗೆ ಕಾರಣಭೂತವಾದ ದೆಸೆಯಿಂದ "ಸ್ಥಲ" ವೆಂತಲೂ ಈ ಪರಶಿವನು ಸಂಜ್ಞೆಗೊಂಡಿದ್ದಾನೆ. ಏಕಮೆವ ಪರಬ್ರಹ್ಮ ಸಚ್ಚಿದಾನಂದ ಲಕ್ಷಣಂ ಶಿವತತ್ವಂ ಶಿವಾಚಾರ್ಯೈಃ ಸ್ಥಲಾಭಿತ್ಯಾಹಶದರಾತ್ (ಅನುಭವ ಸೂತ್ರ ೧೨)

ಇನ್ನೊಂದು ವಿಧವಾಗಿ ತಿಳಿಸಬೇಕೆಂದರೆ 'ಶಿವಲಿಂಗ ಸ್ಥಲ ಈ ಪದಗಳಿಂದ ವರ್ಣಿತನಾದ ಪರಶಿವನು ಪರಿಪೂರ್ಣ ಅರಿವಿನಿಂದ ಭಿನ್ನವಲ್ಲ. ಪರಿಪೂರ್ಣವಾದ ನಿರಂತರವಾದ ಅರಿವೇ ಅವನಾಗಿರುವನು. ಮರವೆಯ ಪರೆಯನ್ನು ಓರೆಮಾಡಿಕೊಂಡ ಪುರುಷನು ಅರಿವಿನ ಹೊಂದುಗೆಯ ದೆಸೆಯಿಂದ ಪರಶಿವನೇ ಆಗುವನು.



## ಲೀಲಾ ವಿಲಾಸ

ವೀರಶೈವ ತತ್ವಜ್ಞರು ಸೃಷ್ಟಿಯ ಕ್ರಮವನ್ನು ಒಂದು ಸ್ವತಂತ್ರ ವಾದ ರೀತಿಯಲ್ಲಿ ಹೇಳಿದ್ದಾರೆ. "ಸೃಷ್ಟಯರ್ಥಂ ಸವತತ್ವಾನಾಂ ಜಗದುತ್ಪತ್ತಿಕಾರಣೆ. ಯೋಗಿನಾಮುಪಕರಾಯ ಸ್ವೇಚ್ಛಾಯಾಚಿಂತಯತ್‌ಶಿವಃ" ಎಂಬ ಸೂಕ್ಷ್ಮಾಗಮದ ಮಾತುಗಳಲ್ಲಿ ಶಿವನು ತನ್ನಸಂಕಲ್ಪ ಶಕ್ತಿಯಿಂದ ಶಿವಯೋಗಿಗಳ ಉಪಕಾರಕ್ಕೆಂದು ಈ ಸೃಷ್ಟಿಯನು ನಿರ್ಮಿಸಿದನು ಎಂಬುದು ಸ್ಪಷ್ಟವಾಗುವದು. ಶಿವ ತನ್ನಶಕ್ತಿಯ ವಿನೋದಕ್ಕೆ ರಚಿಸಿದನು ಅನಂತ ವಿಶ್ವವನು. ಲಿಂಗಕ್ಕೆ ಲೀಲಾವಿಲಾಸ ತೋರಿದಲ್ಲಿ ಚಿತ್‌ಪ್ರಭಾಕಾಶವೇ ಸ್ಫುರಿಸಿ, ನಾನಾತ್ವವನ್ನೈದಿ ಪರಿಚ್ಛಿನ್ನಾತ್ಮರಾದರು. ಸಕಲ ಜಗವೆಲ್ಲವೂ ಪರಶಿವನ ನೆನಹುಮಾತ್ರದಿಂದಾದವು ಎಂಬೀ ವಚನಕಾರರ ವಾಣಿಗಳಲ್ಲಿ ಪ್ರಪಂಚವೆಲ್ಲ ಶಿವಲೀಲೆಯೆಂಬ ಸ್ಪಷ್ಟವಾದ ಅಭಿಪ್ರಾಯವಡಗಿದೆ. ವೀರಶೈವರು ಈ ಸೃಷ್ಟಿಯು ಪರಶಿವನ ಪರಮಪ್ರಸಾದವೆಂದು ಹೇಳಿ ಅತ್ಯಂತ ಗೌರವದಿಂದ ಇದನ್ನು ಕಂಡಿದ್ದಾರೆ. ಇದರಿಂದಾಗಿ ಇದರ ನಿತ್ಯವನ್ನೂ ಅವರು ಒಪ್ಪಿಕೊಂಡಿದ್ದಾರೆ. ಪರಶಿವನ ತನ್ನ ನಿಗೂಹನ ಶಕ್ತಿಯ ಪ್ರಭಾವದಿಂದ ರೂಪಾಗಲೂ ಬಲ್ಲ, ರೂಪವಾಗದಿರಲೂ ಬಲ್ಲ, ಜಗವಾಗಲೂ ಬಲ್ಲ, ಜಗವಾಗದಿರಲೂ ಬಲ್ಲ. ಲೀಲೆಯಾದಡೆ ಆತ ಉಮಾಪತಿ ಲೀಲೆ ತಪ್ಪಿದಡೆ ಸ್ವಯಂಭು. ಅದಕ್ಕೋಸುಗ ಇಹದ ಬಾಳುವೆಯ ಮಹತಿಯನ್ನು ವೀರಶೈವರು ಅಲ್ಲಗಳೆಯುವದಿಲ್ಲ. ತನ್ನ ವಿನೋದಕ್ಕೆ ತಾನು ಸೃಷ್ಟಿಸಿ ತನ್ನ ವಿನೋದಕ್ಕೆ ತಾನೆ ತಿರುಗಿಸಿ ತನ್ನ ಜಗದ್ವಿಲಾಸಸಾಕಾದಡೆ ಮತ್ತೆ ಪರಿವನಾ ಮಾಯಾ ಪಾಶವನು ಎಂಬ ಅನನ್ಯವಾದ ದೃಢವಾದ ನಂಬುಗೆಯುಳ್ಳವರಾಗಿರುವರು ವೀರಶೈವಾನುಭವಿಗಳು.

ಅದ್ವೈತಿಗಳು ಸೃಷ್ಟಿಯೆಂಬುದೆಲ್ಲ ಅಧ್ಯಾಸವೆಂದು ಈ ಸೃಷ್ಟಿಗೆ ಅನಾದಿ ಮಾಯೆಯೆ ಕಾರಣವೆಂದು ಹೇಳುವರು. ಅಧ್ಯಾಸವೆಂದರೆ "ಸ್ಮೃತಿರೂಪಃ ಪರಅಪೂರ್ವದಷ್ಟಾವಭಾಸಃ ಅತದತಿ ತಂದತ್ ಪ್ರಕಾರತ್ವನು" ಹಗ್ಗವು ಹಾವು ಎಂಬ ತಪ್ಪು ತಿಳಿವಳಿಕೆ. ಆದರೆ ಕಾರಣದ ಗುಣವನ್ನು ಕಾರ್ಯದಲ್ಲಿ ಕಾಣಬೇಕೆಂಬ ತರ್ಕಶಾಸ್ತ್ರದ ನಿಯಮದಂತೆ ಸತ್ಯರೂಪವಾದ ಪರಬ್ರಹ್ಮದಿಂದ ಅಸತ್ಯರೂಪವಾದ ಪ್ರಕೃತಿಯು ಹುಟ್ಟುವದು ಅಸಂಭವ.ಅದಕ್ಕಾಗಿ ಈ ಸೃಷ್ಟಿಯು ಸಟೆಯಲ್ಲ, ದಿಟ. ಇಲ್ಲದ ಮಾಯೆಯನ್ನುಉಂಟೆಂದು ಭಾವಿಸುವದು ಭ್ರಮೆ ಎಂದು ವಿಶಿಷ್ಟಾದ್ವೈತಿಗಳು ನಂಬುತ್ತಾರೆ. "ಗುಹೇಶ್ವರನೆಂಬ ಅರಿವು ಸಿನೆ ಬಂಜೆಯಾದುದಲ್ಲ" ಎಂದು ಅಲ್ಲಮ ಪ್ರಭು ದೇವರು ತಿಳಿಸುತ್ತಾರೆ.

ಜೀವನು ಬ್ರಹ್ಮನಿಗಿಂತ ಭಿನ್ನನು ಎಂಬ ದ್ವೈತಿಗಳ ವಾದವೂ, ಬ್ರಹ್ಮನ ಒಂದಂಶವೆಂಬ ವಿಶಿಷ್ಟಾದ್ವೈತಿಗಳ ವಾದವೂ ವೀರಶೈವರಿಗೆ ಒಪ್ಪಿಗೆಯಿಲ್ಲ ಶಕ್ತಿ ವಿಶಿ–

ಷ್ಟಾದ್ವೈತದಲ್ಲಿ ಜೀವನು ದೇವನಿಂದ ಬೇರೆಯಲ್ಲ. ಪರಿಪೂರ್ಣವಾದ ಅರಿವಿನಿಂದ ಬೆರೆತ ಜೀವನವೇ ದೇವನು

### ದಾ ರ್ಶ ನಿ ಕ ರು

ಅದ್ವೈತವನ್ನು ಕೇವಲ ಬಾಯಿಯಿಂದ ಹೇಳುವದನ್ನು ಕೃತಿಯಲ್ಲಿ ತಂದವರು ವೀರ-ಶೈವ ದಾರ್ಶನಿಕರು. ಅವರು ಜಗತ್ತನ್ನು ಸತ್ಯವೆಂದು ಭಾವಿಸಿದರೂ ಅದರ ಬಗೆಗೆ ಅಭಿಮಾನವನ್ನು ತೋರೆದು ಪರಿಪೂರ್ಣವಾದ ಅರಿವಿನ ವಿಕಾಸವನ್ನೇ ಜೀವನದ ಪರಮಾದರ್ಶ ಎಂಬ ಹಿರಿಯ ಗುರಿಯನ್ನಾರಿಸಿ ಕೊಂಡಿದ್ದಾರೆ. ಅಹಂಭಾವದಿಂದ ಕುದುರುವ ಕರ್ತೃತ್ವಾಭಿಮಾನ ಪರಾಪೇಕ್ಷೆ ಇವುಗಳನ್ನು ಅಡಗಿಸಿಕೊಂಡು ಸೃಷ್ಟಿಯಲ್ಲಡಗಿದ ಪರಶಿವನ ಲೀಲಾ ವಿಲಾಸವನ್ನು ಕಾಂಬದೃಷ್ಟಿಯನ್ನು ಪಡೆದಿದ್ದಾರೆ. ಶಕ್ತಿ ವಿಶಿಷ್ಟಾದ್ವೈತಿಗಳು ಅದಕ್ಕಾಗಿ ಹಲವು ದಾರ್ಶನಿಕರಂತೆ ಜೀವರೆಲ್ಲ ಸ್ತ್ರೀ—ಪುರುಷವೆಂಬ, ಉಚ್ಚನೀಚವೆಂಬ ಭಾವಕ್ಕೆ ಅನುವನ್ನೀಯುವದು ನ್ಯಾಯವಲ್ಲವೆಂದೂ ಮಾನವರ ಜಾತಿ ಲಿಂಗ ವಯ ವರ್ಣ ಆಶ್ರಮ ಮುಂತಾದವುಗಳು ಅರಿವಿನ ವಿಕಾಸಕ್ಕೆ ಪ್ರತಿಬಂಧಕ ವಾಗಲೆಂದೂ ಈ ಮತದಲ್ಲಿ ಹೇಳಲ್ಪಟ್ಟಿರುತ್ತದೆ. ಅದ್ವೈತವು ಪರಮಾವಧಿಯಲ್ಲಿ ಅತ್ಯಂತಿಕ ಸತ್ಯವಾದರೂ ಸಾಧ ಸ್ಥಿಯಲ್ಲಿ ಜಿಜ್ಞಾಸುವಾದ ಜೀವನು ದ್ವೈತವನ್ನಾಶ್ರಯಿಸುವದು ಯುಕ್ತವೆಂದೂ ಶಿಖಿ ಕರ್ಪುರ ಸಂಯೋಗದಂತೆ ಆ ಸಾಧಕನ ದ್ವೈತಭಾವವು ಪರಿಣಾಮದಲ್ಲಿ ಅದ್ವೈತವನ್ನೈದುವದೆಂದೂ ವಿಶಿಷ್ಟಾದ್ವೈತವು ಅಭಿಮತಗೊಳುವದು ಹೀಗೆ ದ್ವೈತಾ ದ್ವೈತ ಸಮನ್ವಯವ ಅಂಗೀಕೃತವಾಗಿರುವದ-ರಿಂದ ಇತರ ಮತಗಳಲ್ಲಿ ಕಾಣಲಾಗದ ಸರ್ವ ಶ್ರುತಿಸಮನ್ವಯವನ್ನೂ ಈ ಮತವು ಒಪ್ಪಿಕೊಳ್ಳುವದೆಂದು ಶ್ರೀಕರಭಾಷ್ಯವು ಸಾರುವದು.

ಅರಿವಿನ ಸಂಪೂರ್ಣವಾದ ವಿಕಾಸಕ್ಕಾಗಿ ಸಾಧಿಸುವ ಶುದ್ಧ ಜೀವನು (ಅಂಗನು) ಸರ್ವಜ್ಞನಾದ ಪರಶಿವನನ್ನು (ಲಿಂಗವನ್ನು) ತನ್ನಲ್ಲಿ ಕಾಣಬಯಸುವನು. ಈ ಅವನ ಗುರಿಯ ಸಾಧನೆಯಲ್ಲಿ ಅನುಭಾವಿಗಳಾದ ಶಾಸ್ತ್ರಕಾರರು ಆರು ಹಂತಗಳನ್ನು ಕಂಡಿರುವರು. ಷಟ್ ಸ್ಥಲವೆಂದು ಹೆಸರಾಂತ ಸಾಧನೆಯ ತಿರುಳು ಶಕ್ತಿ ವಿಶಿಷ್ಟ ಅದ್ವೈತದಲ್ಲಿ ಒಂದು ಪ್ರಾಮುಖ್ಯವಾದ ಸ್ಥಾನವನ್ನು ಪಡೆದಿದೆ. ಈ ಸಾಧನೆಯ ಕ್ರಮದಲ್ಲಿ ಲಿಂಗ ಅಂಗ ಸಮಂಸವೇ ಶಕ್ತಿ ವಿಶಿಷ್ಟಾದ್ವೈತಕ್ಕೆ ಪರಮ ಧ್ಯೇಯವಾಗಿರುವದು. ಸರ್ವಾಂಗ ಲಿಂಗ ಸ್ಥಲದ ಆ ಅನುಭಾವಿಗಳ ನಿಲವಿನಲ್ಲಿ ಸರ್ವೇಂದ್ರಿಯಗಳೆಲ್ಲ ಲಿಂಗ ಕಿರಣದಿಂದ ಪ್ರಭಾವಿತವಾಗುತ್ತವೆ.

ಗೀರ್ವಾಣ ವಾರಿಧಿಯಲ್ಲಿ ಶಕ್ತಿ ವಿಶಿಷ್ಟಾದ್ವೈತವೆಂಬ ಅನರ್ಘ ರತ್ನವನ್ನು ಬೆಳಗಿಸಿದ ಶ್ರೇಯಸ್ಸು ವಚನಕಾರರಿಂದ ಈಚೆಗೆ ಆಗಿಹೋದ ಆ ಘನವಿದ್ವಾಂಸರೂ ದಿವ್ಯಾನುಭವಿಗಳೂ ಆದ ಶಿವಯೋಗಿಗಳಿಗೆ ಸಲ್ಲುವದು. ಶಿವಾದ್ವೈತ ಮಂಜರಿ.



ಸಿದ್ಧಾಂತ ಶಿಖಾಮಣಿ ಕ್ರಿಯಾಸಾರ ಅನುಭವಸೂತ್ರ ಕೈವಲ್ಯಸಾರ, ವೀರಶೈನಾ-ನಂದ ಚಂದ್ರಿಕೆ ಈ ಮುಂತಾದ ಗ್ರಂಥಗಳು ವೀರಶೈವ ವಚನಕಾರರಿಂದ ಸ್ಫೂರ್ತಿಯನ್ನು ಪಡೆದು ಶಕ್ತಿ ವಿಶಿಷ್ಟಾದ್ವೈತವನ್ನು ಬೆಳಗಿಸುತ್ತವೆ. ಪರಬ್ರಹ್ಮನು ಸಚ್ಚಿದಾನಂದ ಸ್ವರೂಪನಾಗಿದ್ದಾನೆ ಎಂಬ ಈ ನಿಲುವನ್ನು ಅಸ್ಮಿ ಪ್ರಕಾಶ ನಂದಾಮಿ ಎಂಬ ಪದಗಳು ಸೊಗಸಾಗಿ ವಿವರಿಸುತ್ತಿದ್ದರೂ ಅದನ್ನು ಕರಗತಮಾಡಿಕೊಂಡು ಕನ್ನಡಿಯಂತೆ ಬೆಳಗಿಸಿಹ ಬಲ್ಮೆಯು ಈ ಶಕ್ತಿ ವಿಶಿಷ್ಟಾದ್ವೈತಿಗಳಿಗೆ ಸೇರಿದುದು. ಅರಿವುತಾನೆ ತಾನಾಗಿ ಬೆಳಗುತ್ತಿದ್ದು ಅದರಿಂದ ಅಪರಿಮಿತವಾದ ಆನಂದ ಉಕ್ಕುಹೊರಹೊಮ್ಮುವದು, ಇಂತಹ ಆನಂದವನ್ನು ಅನುಭವಿಸಿ ಪರಾಕೃತಿಯ ನೆರವಿ-ನಿಂದ ಪುರುಷನು ಪರಬ್ರಹ್ಮನಾಗುವ ಉದ್ದೇಶವು ಶಕ್ತಿ ವಿಶಿಷ್ಟಾದ್ವೈತ ಸಿದ್ಧಾಂತದಲ್ಲಿ ಹುದುಗಿಹುದು.

---



ಅನುಭವ ಮಂಟಪದಲ್ಲಿ

## ಬಾಳಿ ಬೆಳಗಿದ ಕಾಯಕ ವೀರರು



—ಈಶ್ವರಚಂದ್ರ ಚಿಂತಾಮಣಿ, ಲಚ್ಯಾಣ

ಅನುಭಾವ ವೆಂಬುದು ಅಂತರಂಗದ ವಿದ್ಯೆ, ಆತ್ಮ ಜ್ಯೋತಿ. ಈ ಅನುಭಾವದ ಆಳದಲ್ಲಿಳಿದು ಆನಂದಿಸಿದವರು ಅಸಂಖ್ಯಾತ ಶಿವಶರಣರು. ಅವರು ಕಲ್ಯಾಣದಲ್ಲಿದ್ದು ವಿಶ್ವ ಕಲ್ಯಾಣ ಸಾಧಿಸಿದ ಮಹಾನ್ ವಿಭೂತಿಗಳು. ಅವರವರ ಅನುಭಾವದ ಮಹಾ ಬೆಳಕು ಎಲ್ಲೆಡೆಗೂ ಪ್ರಕಾಶ ಬೀರಿ ಅನುಭಾವಿಗಳನ್ನು ಶರಣರನ್ನು ಆಕರ್ಷಿ-ಸಿತು. ಕಲ್ಯಾಣದ 'ಅನುಭವ ಮಂಟಪ' ವು ಅನುಭಾವಿಗಳಿಂದ ತುಂಬಿತು. ಜಾತೀಯತೆಯ ರೋಗದಿಂದ ಮುಕ್ತ ಗೊಳಿಸಿ ಮಾನವಕುಲದ ಮಹತಿಯನ್ನುಸುರಿ, ಎಲ್ಲರನ್ನು ಕಾಯಕ ವೀರರನ್ನಾಗಿ ಅಣಿಗೊಳಿಸಿದ ಶ್ರೇಯ ಕನ್ನಾಡಿನ ಶಿವಶರಣರಿಗೆ ಸಲ್ಲುತ್ತದೆ. ಆತ್ಮಜ್ಞಾನಿ ಅಲ್ಲಮ ಪ್ರಭುಗಳ ಹಿರಿತನದಲ್ಲಿ, ಭಕ್ತಿ ಭಾಂಡಾರಿ ಅಣ್ಣ ಬಸವಣ್ಣನ ಆಶ್ರಮದಲ್ಲಿ ಮೂಡಿ, ಬೆಳೆದು ಬೆಳಕು ಬೀರಿದ ಕಲ್ಯಾಣದ ಅನುಭವ ಮಂಟಪದಲ್ಲಿ ಅಂದು ಮಿಂಚಿ ಮರೆಯಾದ ಮಾನವತಾವಾದಿಗಳು ಬಬ್ಬರೇ,ಇಬ್ಬರೆ. ಸಾವಿರಾರು ಜನ ಶರಣರವರು.

ಅಂದು ಶೈವ ಧರ್ಮದ ಉಪಸಿದ್ಧಾಂತಗಳು ಒಂದು ನಿಟ್ಟಿನಲ್ಲಿ ಒಂದು ಸೂತ್ರದಲ್ಲಿ ಒಂದೆ ಬಗೆಯಾಗಿರಲಿಲ್ಲ, ಅವು ನಾನಾ ಕಡೆಗಳಲ್ಲಿ ನಾನಾ ರೀತಿಯಿಂದ ಸಾಗಿದ್ದವು. ಈ ದ್ವಂದದ ದಂದುಗವನ್ನು ಮಸದಂಡು, ಅವೆಲ್ಲವನ್ನು ಸಮನ್ವಯಗೊಳಿಸಿ ಪರಿಷ್ಕರಿಸಿ ಶುದ್ಧಗೊಳಿಸಿದ ಶ್ರೇಯಸ್ಸು ಅಣ್ಣ ಬಸವಣ್ಣನವರಿಗೆ ಸಲ್ಲುತ್ತದೆ. ಅವರ 'ಸರ್ವೇಜನ ಸುಖಿನೋ ಭವಂತು' ಸನ್ಮಾರ್ಗ ಎಲ್ಲೆಡೆಗೂ ಕೇಳಿಬಂತು. ಜಿಜ್ಞಾಸುಗಳಿಗೆ ಕಲ್ಯಾಣದ ಆಹ್ವಾನವಾಗಿ ಪರಿಣಮಿಸಿತು. ಹೀಗಾಗಿ ಅಸಂಖ್ಯಾತ ಅನುಭಾವಿಗಳು ಕಲ್ಯಾಣದತ್ತ ಸಾಗಿಬಂದರು.

ಕಲ್ಯಾಣಕ್ಕೆ ಸಾಗಿಬಂದವರಲ್ಲಿ ಸಾಮಾನ್ಯ ಆಳುತನ ಮಾಡುವವರಿಂದಾದಿಯಾಗಿ ಆಳರಸರವರೆಗೂ ತಮ್ಮ ತಮ್ಮ ಉದ್ಯೋಗ, ಮನೆಮಠಗಳನ್ನು ತೊರೆದು ಬಂದವರು ಹಲವರು. ಅವರೆಲ್ಲರು ಕಲ್ಯಾಣದಲ್ಲಿ ಒಂದೊಂದು ಕಾಯಕವನ್ನು ಕೈಗೊಂಡು ಶಿವಾನುಭವಿಗಳಾಗಿ ಅನುಭಾವ ಸಾಗರದಲ್ಲಿ ಲೋಲಾಡಿದರು. ಅನುಭಾವ ಮತ್ತು ಸಾಧನೆಯ ಸಾಗರದಲ್ಲಿ ತೇಲಿದರೆ ಇಲ್ಲವೆ ಮುಳುಗಿದರೆ ಅಷ್ಟೇ ಸುಖ; ಅದುವೆ ಜೀವನ್ಮುಕ್ತಿ. ಆ ಶರಣವರೇಣ್ಯರಿಗೆ ಈ ವಿಶ್ವವೊಂದು ದೇವಾಲಯವಾಗಿ ಕಂಡಿತು. ಸಕಲ ಜೀವಾತ್ಮರ ಚೈತನ್ಯ ಜ್ಯೋತಿಯೇ ದೇವಾದಿದೇವನೆಂದು ಅವರು ಕಂಡದ್ದು. ಎಲ್ಲರ ಸೇವೆಯಲ್ಲಿ ಪೂಜೆಯನ್ನು ಎಲ್ಲರ ಕಲ್ಯಾಣದಲ್ಲಿ ಸ್ವಕಲ್ಯಾಣವನ್ನು ಮುಕ್ತಿಯನ್ನು ಅವರು ಅನುಭವಿಸಿದರು; ನುಡಿದು ನಡೆದು ತೋರಿಸಿದರು - ಸರ್ವಾರ್ಪಣಭಾವದಿಂದ ಬಾಳಿದ ಶಿವಶರಣರು ಮಹಾತ್ಯಾಗಿಗಳು; ಮಾನವಕುಲದ ಮಹಾರತ್ನ ಅವರು.

ಕಾಶಿಯ ಹೆಸರಾದ ವಿದ್ವಾಂಸನೆಂದು. ಶಿವಸಿದ್ಧಾಂತದ ಪ್ರವೀಣನೆಂದು ಹೆಸರಾದ ಮಹಾಷ್ಟ್ರದ ಶರಣ ಶಿವಲೆಂಕ ಮಂಚಣ್ಣನು ಮುಪ್ಪಿನ ಕಾಲದಲ್ಲಿ ಕಲ್ಯಾಣಕ್ಕೆ ಬಂದ ಅಣ್ಣನವರ ಆದರ್ಶಕ್ಕೆ ಮನಸೋತರು. ಅನುಭವ ಮಂಟಪದ ಗೋಷ್ಠಿಯಲ್ಲಿ ಭಾಗವಹಿಸಿದರು . ಕೊನೆಗಾಲವೆಲ್ಲ ಕಲ್ಯಾಣದಲ್ಲಿ ಕಳೆಯಿತು.

ಮಾಳವ ಪ್ರಾಂತದ ಕೀಳು ಕುಲದಲ್ಲಿ ಜನಿಸಿದ ಡೋಹರಕಕ್ಕಯ್ಯನು ಕಲ್ಯಾಣದ ಕಣ್ಮಣಿಯಾಗಿದ್ದನಲ್ಲವೇ ? ಚರ್ಮದ ಕಾಯಕದಲ್ಲಿದ್ದುಕೊಂಡು ಅನುಭಾವದ ಬೆಡಗಿನ ವಚನ ಹೇಳಿದನು ಅನುಭವ ಮಂಟಪದಲ್ಲಿ ಶೋಭಿಸಿದನು.

ಸೌರಾಷ್ಟ್ರದ ಸಿರಿವಂತ ಧೀಮಂತ ಅವನ ಹೆಸರು ಸೊಡ್ಡಳ ಬಾಚರಸ. ಕಲ್ಯಾಣದ ಕೀರ್ತಿವಾರ್ತೆಯನ್ನು ಕೇಳಿ ಹಂಬಲಿಸಿ ಬಂದ ಭಕ್ತನವ. ರಾಜನ ಭಂಡಾರದಲ್ಲಿ ಧಾನ್ಯ ಅಳೆಯುವ ಕಾಯಕ ಮಾಡುತ್ತ ಅನುಭಾವ ಮಾರ್ಗದಲ್ಲಿ ಮುನ್ನಡೆದು ಮುಕ್ತನಾದನು.



ಸಕಲೇಶ ಮಾದರಸ ಈತನು ತಮಿಳು ನಾಡಿನ ಕಲ್ಲುಕುರಿಕೆಯ ಅರಸನು ಕಲ್ಯಾಣಕ್ಕೆ ಬಂದು ಅಣ್ಣನವರ ಭಕುತಿಗೆ ಮುಗ್ಧನಾಗಿ ಮಹಾಮನೆಯಲೊಂದು ಕಾಯಕ ಕೈಕೊಂಡು ನೆಲೆಯೂರಿನಿಂತ. ಅನುಭವ ಮಂಟಪದಲ್ಲಿ ಸ್ತೋತ್ರ ಪಾಠಕನಾಗಿ ಸೇವೆ ಸಲ್ಲಿಸಿದನೆಂದು ಶರಣ ಚರಿತೆಕಾರರು ಹೇಳುತ್ತಾರೆ.

ಕುಲದ ಕಸಬಿನಿಂದ ಅಕ್ಕಸಾಲಿಗನಾದ ಬ್ರಹ್ಮಯ್ಯನು ಕಲ್ಯಾಣದಲ್ಲಿ ಕಿನ್ನರಿ ನುಡಿಸುತ್ತ ಕಿನ್ನರಿ ಬ್ರಹ್ಮಯ್ಯನಾದ. ಅತಿಥಿ ಸತ್ಕಾರ ಹಾಗೂ ಶರಣರ ರಕ್ಷಣೆ ಈತನ ನಿತ್ಯ ಕಾಯಕವಾಗಿತ್ತು.

ಮೇದಾರ ಕೇತಯ್ಯನ ಜನ್ಮಭೂಮಿ ಬೇಲೂರು. ಅದು ಪಶ್ಚಿಮದ ಮಲೆನಾಡಿನಲ್ಲಿದೆ. ಈತನು ಬಿದಿರಿನಿಂದ ಬುಟ್ಟಿ, ಮೊರ, ಕರಡಿಕೆಗಳನ್ನು ಮಾಡುತ್ತ ಕಲ್ಯಾಣದಲ್ಲಿದ್ದ. ಮೇದಾರ ಕೇತಯ್ಯನ ಅನುಭವದ ವಚನಗಳು ಸಾಕಷ್ಟಿರದಿದ್ದರೂ ಇದ್ದಷ್ಟು ಬಹು ಅಮೂಲ್ಯವಾಗಿವೆ.

ಸೊನ್ನಲಿಗೆಯ ನೇಕಾರನಾಗಿದ್ದ ಅಮುಗಯ್ಯ ಸಿದ್ಧರಾಮನನ್ನು ಆಕರ್ಷಿಸಿದ. ಪ್ರಭು ಕಾರುಣ್ಯವು ಶರಣ ಅಮುಗಯ್ಯನು ಸಹ ಎಳೆದೊಯ್ದಿತು ಕಲ್ಯಾಣ ಮಂಟಪಕ್ಕೆ. ತನ್ನ ಕುಲದ ಕಸಬನ್ನೇ ಅಲ್ಲಯೂ ಮಾಡುತ್ತ ಶರಣರ ಸಂಗದಿಂದ ಸತ್ಯ ಶಾಂತಿ ಪಡೆದು ಮುಕ್ತನಾದ.

ಓಡಿಸಾದ ಸಮೀಪದ ಮಾತಂಗ ಕಾಡಿನಲ್ಲಿ ಕ್ರೂರ ಮೃಗಗಳಿಗಿಂತ ಕ್ರೂರ ಕರ್ಮಗಳೆಲ್ಲವನ್ನು ಮಾಡುತ್ತ ಬದುಕಿದ್ದನಲ್ಲಿ ಮಾತಂಗತಮ್ಮ. ಅವನೊಬ್ಬ ಬೇಡರವ. ಕೊಲೆ ಸುಲಿಗೆಯೇ ಅವನ ನಿತ್ಯದ ಕಾಯಕ. ಸುಜ್ಞಾನಿ ದೇವರೆಂಬ ಓಡಿಸಾದ ಶರಣರ ಸಂಪರ್ಕದಿಂದ ಅವನಿಗೆ ಜ್ಞಾನೋದಯವಾಯಿತು. ಅವರ ಸಂಗಡ ತಾನೂ ಕಲ್ಯಾಣಕ್ಕೆ ಬಂದು ನೆಲೆಸಿ 'ನನ್ನಯ್ಯ' ನೆಂದು ಹೆಸರಾದ ಶರಣನೀತ. ಮಹಾಮನೆಯ ದ್ವಾರಪಾಲಕನಾಗಿ ಸೇವೆ ಸಲ್ಲಿಸುತ್ತ ಶಿವಾನಂದದಲ್ಲಿ ಲೀನನಾದ.

ಕಲ್ಯಾಣದಲ್ಲಿ ಉರುವಲು ತಂದು ಪೂರೈಸುವ ಮೋಳಿಗೆಯ ಮಾರಯ್ಯನು ಕಾಶ್ಮೀರ ದೇಶದ ಚಿಕ್ಕ ಅರಸನಾಗಿದ್ದನು. ಮಾಂಡವ್ಯಪುರ ಅವನ ರಾಜಧಾನಿಯಾಗಿತ್ತು. ಮುನ್ನಿನ ಅವನ ಹೆಸರು ಮಹಾದೇವ ಭೂಪಾಲ. ಆಳರಸನೊಬ್ಬನು ಕಲ್ಯಾಣದ ಬೆಳಕಿನಿಂದ ಕಟ್ಟಿಗೆ ಕಡೆಯುವ ಕಾಯಕಕ್ಕೆ ಒಲಿದು ನಲಿದು ನಿಂತ ಘಟನೆ ಸಾಮಾನ್ಯವೇ ? ಮೋಳಿಗೆಯ ಮಾರಯ್ಯನವರು ಮಹಾ ಅನುಭಾವಿಗಳಾಗಿ ಶರಣರ ಸಂಗಡ ಸತ್ಕಾರ್ಯವೆಸಗಿದರು. ಅವರ ನುಡಿಮುತ್ತುಗಳು ಚಿತ್ತಾಕರ್ಷಕವಾಗಿವೆ.

ಕಾಶ್ಮೀರ ದೇಶದ ಇನ್ನೊಬ್ಬ ಅರಸು ಗುವರಿ 'ಭೋಂತಾದೇವಿ' ಕಲ್ಯಾಣದ ಶಿವಶರಣೆಯಾಗಿ ಮೆರೆದಳು. ಅವಳು ಕೈಗೊಂಡ ಕಾಯಕ ಕಸ ಗೂಡಿಸುವದು, ಅವಳ ವಸತಿ ಓಣಿಯಲ್ಲಿ. ಕಲ್ಯಾಣ ನಗರದ ನೈರ್ಮಲ್ಯದಿಂದ ಅವಳ ಭಾವಶುದ್ಧಿ ಮಿಗಿಲಾಗಿ ಬೆಳೆಯಿತು. ಅವಳಿಗೆ 'ಕಾಯಕವೆ ಕೈಲಾಸ' ವಾಗಿ ಪರಿಣಮಿಸಿತು.

ಬೆಟ್ಟದ ನಾಡಿನ ಹೆಸರಾಂತ ಆಟಗಾರ ನೀಲಗಿರಿಯ ಚೌಡಯ್ಯ ಕಲ್ಯಾಣದಲ್ಲಿ ಶರಣರ ಜಿವೀತದ ಸತ್ಕಥೆಗಳನ್ನು 'ರೂಪಕ' ಮಾಡಿ ಆಡಿತೋರಿಸುವ ಕಾಯಕದ ಚೌಡಯ್ಯನು ಬಹು ರೂಪಿಯಾಗಿ ಲೀಲೆಯನಾಡಿದ ಶರಣನು ಬಹು ರೂಪು ಧಾರಣ ಮಾಡಿ ಶರಣರ ತತ್ವ ಪ್ರಚಾರ ಮಾಡಿ ಆತ್ಮ ಜ್ಞಾನದಲ್ಲಿ ಮುಳುಗಿದವನು ಬಹು ರೂಪಿ ಚೌಡಯ್ಯನ ಕಾಯಕದಿಂದ ಅನುಭವವಾಣಿ ಆ ಸುವಾರ್ತೆ ನಾಡಿನ ಮೂಲೆ ಮೂಲೆಗೂ ತೀವ್ರ ಪ್ರಸಾರವಾಗಿರಬೇಕು

ಕಾಶ್ಮೀರಲ್ಲಿ ಸೇನಾಧಿಕಾರಿಯಗಿದ್ದ ಚಿಕ್ಕಯ್ಯನು ಕಲ್ಯಾಣಕ್ಕೆ ಬಂದು 'ನಿಜಲಿಂಗ ಚಿಕ್ಕಯ್ಯ' ನಾದ, ಲಿಂಗಾಂಗ ಸಾಮರಸ್ಯ ಹೊಂದಿದ. ಈ ಶರಣನು ಕಾಡಿನಿಂದ ತಾಡಗರಿಗಳನ್ನು ತಂದು ಶರಣರಿಗೆ ವಚನಗಳನ್ನು ಬರೆಯಲು ಒದಗಿಸುವ ಬಹು ಮುಖ್ಯ ಕಾಯಕ ಕೈಕೊಂಡನು ನಿಜಲಿಂಗ ಚಿಕ್ಕಯ್ಯನ ಕೃಪೆಯಿಂದ ನಾವಿಂದು ಶರಣರ ವಚನಗಳ್ನು ಓದುವಂತಾಗಿದೆ ಎನ್ನಬಹುದು.

ಕಲ್ಯಾಣದಲ್ಲಿ ಬಾಳಿ ಬೆಳಗಿ ಬೆಳಕು ಬೀರಿದ ಮಹಾ ಶರಣೆಯರು ಕಾಯಕ ವೀರರಾಗಿ ಲೋಕ ಕಲ್ಯಾಣ ಬಯಸಿದರು. ಅವರು ಎಲ್ಲರ ಸುಖ ಜೀವನ ಬಯಸಿದರಲ್ಲದೆ ಮಾನವ ಕುಲದ ಮಹಾ ಮಿತ್ರರಾಗಿ ಸೇವೆ ಸಲ್ಲಿಸಿದರು. ಅಂದಿನ ಅನುಭವ ಮಂಟಪ ಆಕರ್ಷಿಸಿದ್ದು ಇಂಥ ವೀರರನ್ನು. ಅಲ್ಲಿ ಸಲ್ಲುವವರೆಲ್ಲ ಎಲ್ಲೆಲ್ಲೂ ಸಲ್ಲಿಸಿದರು; ಸದಾಶಿವನ ಒಲುಮೆಗೆ ಪಾತ್ರರಾದರು.

ಆಲಯಂ ಲೋಕಮಖಿಲಂ। ಮೂರ್ತಿ: ಸರ್ವಾತ್ಮ ಸಂಕುಲಂ ॥
ನಿಷ್ಕಾಮ ಸೇವಾಹಿ ಸತ್ಪೂಜಾ। ಮುಕ್ತಿ: ಸರ್ವಾತ್ಮ ಮಂಗಲಂ ॥

(ಕೃಪೆ : ಅನುಭವಮಂಟಪ) ●



# ಲಿಂಗಾಂಗ ಸಾಮರಸ್ಯ

ಡಾ॥ ಪ್ರೊ : ಸ. ಸ. ಮಾಳವಾಡ, ಧಾರವಾಡ.

ವಿರಶೈವದರ್ಶನದಲ್ಲಿ ಪರವಸ್ತುವನ್ನು ಸ್ಥಲವೆಂದು ಕರೆಯಲಾಗಿದೆ. ಚೇತನಾಚೇತನಾತ್ಮಕವಾದ ಪಪ್ರಂಚದ ಸೃಷ್ಟಿ ಸ್ಥಿತಿ ಲಯಗಳಿಗೆ ಆದಾರಭೂತವಾದುದೇ ಸ್ಥಲ. ಸ್ಥಲ ಶಬ್ದದಲ್ಲಿಯ 'ಸ್ಥ' ವರ್ಣವು ಸ್ಥಾನವಾಚಕ; 'ಲ' ವರ್ಣವು ಲಯವಾಚಕ. ಹೀಗೆ ಶಿವಾನುಭವ ಸೂತ್ರದ ನಿರೂಪಣೆಯಿದೆ. ಆದುದರಿಂದ ಸ್ಥಲವೆಂದರೆ ಸೃಷ್ಟಿ ಸ್ಥಿತಿ ಲಯಗಳಿಗೆ ಕಾರಣವಾದುದು. ಇಂತಹ ಸ್ಥಲತತ್ವವು ಚರಾಚರಾತ್ಮಕವಾದ ಸರ್ವ ಜಗತ್ತಿಗೆ ಆಶ್ರಯ ವಸ್ತುವಾಗಿದೆ. ಸಂಸಾರದ ಪರಿನಿರ್ವಾಣ ಪಡೆಯುವವರಿಗೆ ಅಂತಿಮ ಸ್ಥಾನವಾದರೂ ಸ್ಥಲವೆ. ಸ್ಥಲ ಶಬ್ದವಾಚ್ಯನಾದ ಶಿವನು ಸಚ್ಚಿದಾನಂದ ಸ್ವರೂಪನಾಗಿದ್ದಾನೆ. ಸಕಲ ಲೋಕಗಳಿಗೆ ಆಧಾರವಾದ ವಸ್ತುವೆಂಬ ಅರ್ಥದಲ್ಲಿ ಶಿವ ಶಬ್ದದ ವ್ಯುತ್ಪತ್ತಿಯನ್ನು ಶಾಸ್ತ್ರಗಳಲ್ಲಿ ಹೇಳಲಾಗಿದೆ. ಅರ್ಥಾತ್ ಶಿವತತ್ವವೇ ಸ್ಥಲ ತತ್ವವಾಗಿದೆ

ಸ್ಥಲ ತತ್ವವು ತನ್ನ ಶಕ್ತಿಯ ಕ್ಷೋಭೆಯಿಂದ ಲಿಂಗಸ್ಥಲ, ಅಂಗಸ್ಥಲವೆಂದು ದ್ವಿವಿಧವಾಗುತ್ತದೆ. ಮಣ್ಣಿನಿಂದ ಕೊಡವು ಸುವರ್ಣದಿಂದ ಕಡಗವು ರಚಿತವಾಗುವಂತೆ ಸ್ಥಲ ತತ್ವದಿಂದ ಲಿಂಗಸ್ಥಲ ಅಂಗಸ್ಥಲಗಳಾದವು. ಆದರೆ ವ್ಯತ್ಯಾಸವಿಷ್ಟು; ಇಲ್ಲಿ ಕರ್ತನು ಮೂಲ ವಸ್ತುವಿನಿಂದ ಭಿನ್ನನಲ್ಲ. ಅಂತಸ್ಥ ಶಕ್ತಿಯ ಚಲನವೇ ಈ ದ್ವಿವಿಧ ಪರಿಣಾಮಕ್ಕೆ ಕಾರಣ. ಅಖಂಡವಾಗಿರುವ ಬಯಲು ಕೊಡವನ್ನು ಸೇರಿದಾಗ ಕೊಡದ ಬಯಲೆಂಬ, ಉಳಿದುದು ಮಹಾಕಾಶವೆಂಬ ಉಪಾಧಿಗಳನ್ನು ಪಡೆಯುವಂತೆ ಲಿಂಗಾಂಗಗಳ ಉಪಾಧಿಯಿಂದ ಇಲ್ಲಿ ಸ್ಥಲವೇ ಎರಡಾಯಿತು. ಒಂದು ರೀತಿಯಲ್ಲಿ ಲಿಂಗಾಂಗಗಳನ್ನು ಜ್ಯೋತಿ ಕರ್ಪೂರಗಳಂತೆ ಸ್ಫಟಿಕಪ್ರಭೆಗಳಂತೆ ಎಂದೆನ್ನಬಹುದು

ಸರ್ವಶಕ್ತನಾದ ಶಿವನ ಶಕ್ತಿಗೆ ಚಲನವುಂಟಾದಾಗ ಶಿವನೇ ಲೋಕೋದ್ಧಾರಕ್ಕೆಂದು ಲಿಂಗಾಗಸ್ಥಲ ಭೇದ ಪಡೆಯುತ್ತಾನೆ. ಇದುವೇ ಷಟ್ಸ್ಥಲ ಸಿದ್ಧಾಂತದ ಅಸ್ತಿವಾರ. ಎಂದರೆ ಸ್ವಲೀಲೆಯಿಂದ ಪರವಸ್ತುವು ಲಿಂಗ (ಪರಮಾತ್ಮ) ಅಂಗ (ಜೀವಾತ್ಮ) ಎಂದಾಗುತ್ತದೆ ಈ ಲಿಂಗ ಅಂಗದ ಎಂದರೆ ಪರಮಾತ್ಮ ಜೀವಾತ್ಮರ ಸಾಮರಸ್ಯವೇ ಷಟ್‌ಸ್ಥಲದ ಸಿದ್ಧಾಂತದ ಗುರಿ. ಆ ಗುರಿಯನ್ನು ಮುಟ್ಟುವಾಗಿನ ಸ್ಥಿತಿಯನ್ನುವಚನ ಸಾಹಿತ್ಯದಲ್ಲಿ ಬಗೆದುಂಬಿ ಬಳಿಸಲಾಗದೆ. ಈಗ ಒಂದು ನಿದರ್ಶನವನ್ನು ಮಾತ್ರ ನೋಡಬಹುದು:

"ಘೃತ ಘೃತ ಬೆರೆಸಿದಂತೆ, ಕ್ಷೀರ ಕ್ಷೀರಬೆರೆಸಿದಂತೆ,
ತೈಲ ತೈಲ ಬೆರೆಸಿದಂತೆ ಜ್ಯೋತಿ ಜ್ಯೋತಿ ಬೆರೆಸಿದಂತೆ.
ಬಯಲು ಬಯಲ ಬೆರೆಸಿದಂತೆ. ಪ್ರಾಣ ಪ್ರಾಣ ಸಂಯೋಗವಾದ
ಶರಣ ಲಿಂಗ ಸಹವಾಸವನೇನೆಂಬೆನಯ್ಯ
ಮಹಾಲಿಂಗ ಗುರು ಶಿವ ಸಿದ್ಧೇಶ್ವರ ಪ್ರಭುವೇ"

ಈ ವಚನದಲ್ಲಿ 'ಶರಣಲಿಂಗ ಸಹವಾಸ' ವೆಂಬ ಪದಪ್ರಯೋಗವಿದೆ. ಲಿಂಗ ಭಾವವನ್ನು ಬಲಿಸಿಕೊಂಡ ಅಂಗವನ್ನೇ ಶರಣನೆಂದಿದೆ ಸಮರಸಕ್ಕಿಳಿಯುವ ವಿಶೇಷಾರ್ಥದಲ್ಲಿ ಸಹವಾಸಪದವನ್ನು ಸೂಚಿಸಿದೆ. ಅಂಗವು ಲಿಂಗಭಾವವನ್ನು ಬಲಿಸಿಕೊಂಡಂತೆಲ್ಲ ಸಮರಸಭಾವವು ಬೆಳೆಯುತ್ತ ಹೋಗುತ್ತದೆ. ಸಮರಸದಲ್ಲಿ ದ್ವಂದ್ವ ಭಾಕ್ಕೆಡೆಯಿಲ್ಲ. ಅಂತೆಯೇ ಷಟ್‌ಸ್ಥಲ ಸಿದ್ಧಾಂತದಲ್ಲಿ ದ್ವೈತಾದ್ವೈತಗಳ ಘರ್ಷಣೆಯಿಲ್ಲ. ಅದರೆ ಅಂಗವು ಹಂತ ಹಂತವಾಗಿ ಲಿಂಗವಾಗಿ ತೋರುತ್ತದೆ. ಅದೇ ಷಟ್‌ಸ್ಥಲಮಾರ್ಗ.

ಒಂದು ಬಗೆಯ ಅನುಕೂಲತೆಗಾಗಿ ಲಿಂಗ ಉಪಾಸ್ಯವೆಂದು, ಅಂಗ ಉಪಾಸಕನೆಂದು ಹೇಳಬಹುದಾದರೂ ಉಪಾಸ್ಯ ಉಪಾಸಕರು ಅಭಿನ್ನರೇ ಅಹುದು. ಆ ಅಭಿನ್ನತೆಯ ಅರಿವೇ ತನ್ನರಿವು. ತನ್ನನ್ನು ತಾನೆ ಅರಿತಾಗ, ತಾನು ಪರವಸ್ತುವಿನಿಂದ ಹೊರಹೊಮ್ಮಿದ ಅಂಗಸ್ಥಲವೆಂಬುದು ವೇದ್ಯವಾಗುತ್ತದೆ. ಅಂತೆಯೇ ತನ್ನ ತಾನರಿತಡೆ ತನಗೆ ತಾನೇ ಗುರುವು, ಎಂಬ ಮಾತು ವೀರಶೈವ ದರ್ಶನದಲ್ಲಿ ವಿಶೇಷವಾಗ ಬಳಕೆಯಲ್ಲಿದೆ. ಪ್ರಭುದೇವರು ಹೇಳಿದುದೇನು ?

"ಎಲೆ ಮನವೇ ನೀ ನಿನ್ನ ನಿಜವ ತಿಳಿವಡೆ ಆ ನಿನ್ನ ನಿಜವ ಹೇಳುವೆ. ಅದು ಕೇವಲ ಜ್ಯೋತಿ. ಅದು ವರ್ಣಾತೀತ. ನೀನದಿನರಸುವಾಗ ನಿನಗಾವಲ್ಲಿ ನಿಶ್ಚಯ ತೋರಿತ್ತು, ಅದೀಗ ನಿನ್ನ ಪರಿಪೂರ್ಣತ್ವದ ನೆಲೆ. ಆ ನಿನ್ನ ನಿಜವ ನಿಶ್ಚಯಿಸಿ ನಿರ್ಗಮನಿಯಾದಲ್ಲಿ ಅದೇ ಸಮ್ಯಗ್‌ಜ್ಞಾನದ ತೋರಿಕೆ. ಆ ತೋರಿಕೆಯ ಆಖಂಡ ಬೆಳಗಿನ ಹೊಳಹಿನೊಳಗೆ.........ನಿಶ್ಚಿಂತನಾಗೆಲೆ ಮನವೆ." ಇಂತಹ ತನ್ನರಿವಿನಿಂದ, ಜ್ಯೋತಿಯಿಂದ ತಾನಾರೆಂಬುದು ತನ್ನ ಗುರಿಯೇನೆಂಬದು ಸ್ಪಷ್ಟವಾಗುತ್ತದೆ.

ಮಲತ್ರಯಗಳನ್ನಳಿದ ಪರಿಶುದ್ಧ ಜೀವಿಯೇ ಅಂಗ. ಪರವಸ್ತುವಿನ ಪ್ರತೀಕವೇ ಲಿಂಗ ಅಂಗ ಭವಿಯಲ್ಲ; ಲಿಂಗ ಮೂರ್ತಿಯೂ ಅಲ್ಲ.

ಲಿಂಗ ಅಂಗಗಳಲ್ಲಿ ಪ್ರತ್ಯೇಕವಾಗಿ ಆರಾರು ಸ್ಥಲಗಳನ್ನು ಕಲ್ಪಿಸಲಾಗಿದೆ. ಲಿಂಗವು ಇಷ್ಟ, ಪ್ರಾಣ, ಭಾವವೆಂದು ತ್ರಿವಿಧ. ಮತ್ತೆ ಗುರುಲಿಂಗ, ಆಚಾರಲಿಂಗ, ಪ್ರಸಾದಲಿಂಗ, ಚರಲಿಂಗ, ಶಿವಲಿಂಗ, ಮಹಾಲಿಂಗ ಹೀಗೆ ಆರು ಅಂಗ-



ಸ್ಥಲಗಳು. ಅಂಗವು ತ್ಯಾಗ, ಭೋಗ, ಯೋಗವೆಂದು ತ್ರಿವಿಧ. ಮತ್ತೆ ಭಕ್ತ, ಮಹೇಶ' ಪ್ರಸಾದಿ, ಪ್ರಾಣಲಿಂಗಿ, ಶರಣ, ಐಕ್ಯ ಹೀಗೆ ಆರು ಅಂಗಸ್ಥಲಗಳ ಅರಿವೇ ಷಟ್‌ಸ್ಥಲ ಜ್ಞಾನ.

ಸ್ಥೂಲಶರೀರದಲ್ಲಿ ಸದಾ ಧರಿಸಲೆಂದು, ಬಾಹ್ಯ ಪೂಜೆಗೆಂದು ಗುರುವು ದೀಕ್ಷಾಸಮಯದಲ್ಲಿ ಕೊಟ್ಟುದು ಇಷ್ಟಲಿಂಗ. ಗುರುವು ಅದನ್ನು ಕ್ರಿಯಾದೀಕ್ಷೆಯಿಂದ ಕೊಡುತ್ತಾನೆ. ಪ್ರಾಣಾದಿಗಳಿಂದೊಡಗೂಡಿದ ಸೂಕ್ಷ್ಮಶರೀರಕ್ಕೆ ಸಂಲಗ್ನವಾದುದು ಪ್ರಾಣಲಿಂಗ. ಅದನ್ನು ಗುರು ಮಂತ್ರದೀಕ್ಷೆಯಿಂದ ದಯಪಾಲಿಸುತ್ತಾನೆ. ಆತ್ಮನೊಡನೆ ಸಂಲಗ್ನವಾದುದೇ ಭಾವಲಿಂಗ. ಜ್ಞಾನದೀಕ್ಷೆಯಿಂದ ಗುರು ಅದನ್ನು ದಯಪಾಲಿಸುತ್ತಾನೆ. ಇಷ್ಟಲಿಂಗ ಆನಂದರೂಪ; ಪ್ರಾಲಿಂಗ ಚಿದ್ರೂಪ, ಭಾವಲಿಂಗ ಸದ್ರೂಪ.

ಸ್ಥೂಲಶರೀರ, ಬಾಹ್ಯ ವಿಷಯ ಇವುಗಳ ಅಸಕ್ತಿಯನ್ನು ತೊರೆದು ಇಷ್ಟಲಿಂಗದ ಉಪಾಸನೆ ನಡೆಸುವ ಸ್ಥಲವನ್ನು ತ್ಯಾಗಾಂಗವೆನ್ನುತ್ತಾರೆ. ಅಲ್ಲಿ ಸಂಸಾರ ಭ್ರಾಂತಿಯ ತ್ಯಾಗವಿದೆ. ವಿಷಯಾಸಕ್ತಿಯನ್ನು ಬಿಟ್ಟಬಳಿಕ ಶಿವಪ್ರಸಾದ ಭಾವದಿಂದ ಎಲ್ಲ ಭೋಗಗಳನ್ನು ಭೋಗಿಸುವದು ಭೋಗಾಂಗ. ಈ ಸ್ಥಲದಲ್ಲಿ ಸಾಧಕನು ಶಿವನೊಡನೆ ಭೋಗ ಮಾಡುತ್ತಿರುವುದರಿಂದ ಇದು ಭೋಗಾಂಗ. ವಾಸನಾದಿಗಳೆಲ್ಲ ಲಯವಾಗಿ ಕಾರಣ ಶರೀರವು ಶಿವಜ್ಞಾನದಿಂದ ಯುಕ್ತನಾದ ಸಾಧಕನು ಎಲ್ಲೆಲ್ಲಿಯೂ ಶಿವನನ್ನೆ ಸಾಕ್ಷಾತ್ಕರಿಸಿಕೊಳ್ಳುವದು ಯೋಗಾಂಗ. ಶಿವಯೋಗ ಅದರಿಂದಾಗುವ ಪರಮಾನಂದ. ಇವು ಅಳವಡುವುದರಿಂದ ಈ ಸ್ಥಲವು ಯೋಗಾಂಗದವೆನಿಸುತ್ತದೆ.

ಭಕ್ತಾದಿ ಆರುಸ್ಥಲಗಳ ವಿವರಣೆ ಹೀಗಿದೆ: ಭಕ್ತಸ್ಥಲದಲ್ಲಿ ಶ್ರದ್ಧಾಪೂರ್ವಕ ಗುರುಲಿಂಗಜಂಗಮಗಳ ಉಪಾಸನೆ. ಮಹೇಶಸ್ಥಲದಲ್ಲಿ ಗುರೂಕ್ತ ಮಾರ್ಗದಲ್ಲಿ ನಿಷ್ಠಾಪೂರ್ವಕ ಆಚಾರ. ಪ್ರಸಾದಿಸ್ಥಲದಲ್ಲಿ ಅವಧಾನಪೂರ್ವಕವಾಗಿ ಶಿವಾರ್ಪಿತವನ್ನು ಸೇವಿಸುವುದು. ಅನರ್ಪಿತವಾದುದನ್ನು ತೊರೆಯುವುದು. ಪ್ರಾಣಲಿಂಗಿಸ್ಥಲದಲ್ಲಿ ತದೇಕಾಯುಕ್ತ ಮಾನಸನಾಗಿ ಲಿಂಗವೇ ತನ್ನ ಸರ್ವಸ್ವವೆಂದು ಭಾವಿಸುವದು. ಶರಣಸ್ಥಲದಲ್ಲಿ ಆನಂದಭಾವದಿಂದ ಶಿವಧ್ಯಾನದಲ್ಲಿ ನಿರತನಾಗುವದು. ಐಕ್ಯಸ್ಥಲದಲ್ಲಿ ಸಮರಸಭಾದಿಂದ ಶಿವನೊಂದಿಗೆ ಐಕ್ಯವನ್ನು ಅನುಭವಿಸುವದು.

ಲಿಂಗದ ಗುಣ ಶಕ್ತಿ; ಅಂಗದ ಗುಣ ಭಕ್ತಿ. ಆದರೆ ಶಕ್ತಿ ಭಕ್ತಿಗಳೆರಡೂ ಬೇರೆ ಬೇರ ಸ್ಥಾನದಲ್ಲಿರುವ ಒಂದೇ ಲಕ್ಷಣದ ದ್ವಿವಿಧ ರೂಪಗಳೆಂಬುದನ್ನು ಮರೆಯುವಂತಿಲ್ಲ. ಶಕ್ತಿ ಪ್ರವೃತ್ತಿ ಮಾರ್ಗದ್ದು. ಭಕ್ತಿ ನಿವೃತ್ತಿ ಮಾರ್ಗದ್ದು.

ಲಿಂಗಸ್ಥಲದ ಆಚಾರಲಿಂಗ, ಗುರುಲಿಂಗ, ಶಿವಲಿಂಗ' ಚರಲಿಂಗ, ಮಹಾಲಿಂಗ, ಪ್ರಸಾದಲಿಂಗ ಸ್ಥಲಗಳಿಗೆ ಅನುಕ್ರಮವಾಗಿ ಕ್ರಿಯಾ, ಜ್ಞಾನ, ಇಚ್ಛಾ, ಆದಿ, ಪರಾ, ಚಿತ್ ಎಂಬ ಶಕ್ತಿಗಳ ಅಧಿಷ್ಠಾನವಿದೆ. ಇದೇರೀತಿಯಲ್ಲಿ ಅಂಗಸ್ಥಲದ ಭಕ್ತ, ಮಹೇಶ. ಪ್ರಸಾದಿ, ಪ್ರಾಣಲಿಂಗಿ, ಶರಣ, ಐಕ್ಯ ಸ್ಥಲಗಳಿಗೆ ಸದ್ಭಕ್ತಿ, ನೈಷ್ಠಿಕಾಭಕ್ತಿ; ಅವಧಾನಭಕ್ತಿ, ಅನುಭಾವಭಕ್ತಿ, ಆನಂದಭಕ್ತಿ, ಸಮರಸಭಕ್ತಿ, ಇವುಗಳ ಅಧಿಷ್ಠಾನವಿದೆ.

ಸಾಮಾನ್ಯರ ಅನುಭವಕ್ಕೆ ಹೊಳೆಯುವ ರೀತಿಯಲ್ಲಿ ಲಿಂಗಾಂಗ ಸಾಮರಸ್ಯದ ಕಲ್ಪನೆಯನ್ನು ಸತಿಪತಿಭಾವದಲ್ಲಿ ಶರಣರು ಜಗತ್ತಿಗೆ ತೋರಿಸಿಕೊಟ್ಟಿದ್ದಾರೆ. ಈ ದಿಸೆಯಲ್ಲಿ ತುತ್ತ ತುದಿಯನ್ನು ಮುಟ್ಟಿದವಳೆಂದರೆ ಅಕ್ಕಮಹಾದೇವಿ. ಅಂಗಸತಿಯಾಗಿ, ಲಿಂಗ ಪತಿಯಾಗಿ ಲಿಂಗಕ್ಕೆ ಸರ್ವಸ್ವವನ್ನು ಸಲ್ಲಿಸಿದಾಗಿನ ಅಕ್ಕನವರ ಅನುಭಾವದ ನುಡಿಯನ್ನೊಂದು ಕೇಳೋಣ:

"ನಾ ನಿನಗೊಲಿದೆ, ನೀ ಎನಗೊಲಿದೆ. ನಾನಿನ್ನ ಅಗಲದಿರ್ಪೆ;
ನೀ ಎನ್ನ ಅಗಲದಿರ್ಪೆ, ನಿನಗೆ ನನಗೆ ಬೇರೊಂದು ಠಾವುಂಟೆ?,,

ಪರಶಕ್ತಿಯು ಇಳಿದು ಬಂದಾಗ ಲಿಂಗ ಅಂಗ ವಿಭೇದವಾಯಿತು. ಅಂಗ ಹಂತಹಂತವಾಗಿ ಲಿಂಗದೊಂದಿಗೆ ಕೂಡಿಕೊಂಡಾಗ ಲಿಂಗಾಂಗ ಸಾಮರಸ್ಯವಾಗುತ್ತದೆ ಲಿಂಗಾಂಗಗಳ ಉಭಯ ಸಂಗವೇ ಶಿವೈಕ್ಯ. ಷಡ್ವಿಧ ಅಂಗಸ್ಥಲಗಳು ಷಡ್ವಿಧ ಲಿಂಗ ಸ್ಥಲಗಳೊಂದಿಗೆ ಸಮೀಕರಣ ಪಡೆಯುತ್ತವೆ.

ಪಂಚಭೂತಗಳ ಸಮೀಕರಣವನ್ನೂ ಹೇಳುವದುಂಟು. ಅದು ಹೀಗೆ: ಪೃಥ್ವಿ, ಆಪ್, ತೇಜ, ವಾಯು, ಆಕಾಶ ಕೊನೆಯಲ್ಲಿ ಆತ್ಮ ಇವುಗಳು ಅನುಕ್ರವಾಗಿ ಭಕ್ತ' ಮಹೇಶ, ಪ್ರಸಾದಿ- ಪ್ರಾಣಲಿಂಗಿ, ಶರಣ, ಐಕ್ಯಗಳ ಅಂಗಗಳಾಗಿರುವುದರಿಂದ ಅವುಗಳ ಸಮೀಕರಣ ನಡೆಯುತ್ತದೆ.

ಪ್ರಭುದೇವರು ಸಿದ್ಧರಾಮನನ್ನು ಉದ್ಧರಿಸಲೆಂದು ಹೇಳಿದ 'ಚನ್ನಬಸವ - ಪುರಾಣ, ದಲ್ಲಿ ಉಕ್ತವಾದ ನುಡಿಗಳು ಲಿಂಗಾಂಗ ಸಾಮರಸ್ಯವನ್ನು ಸಾಮಾನ್ಯರಿಗೂ ಸರಿಯಾಗಿ ಬೋಧಿಸುವಂತಿವೆ. ಅವುಗಳಲ್ಲಿ ಕೆಲವನ್ನಿಲ್ಲಿ ಬಳಸಿಕೊಳ್ಳಬಹುದು.

ಪರಶಿವನೇ ಲಿಂಗ; ಪರಮಾತ್ಮನೇ ಅಂಗ. ಅವೆರಡರೊಳು ತೆರಹಿಲ್ಲದಿಪ್ಪುದೆ ಸಂಯೋಗ. ಪರಿವಿಡಿಕ್ರಮದಲ್ಲಿ ಲಿಂಗಾಂಗಗಳ ಸಂಯೋಗವಿಂತಿದೆ. ಹೃದಯದ ಹೃದಯವೇ ಮಹಾಲಿಂಗ; ಶ್ರೋತ್ರದ ಶ್ರೋತ್ರವೇ ಪ್ರಸಾದಲಿಂಗ, ತ್ವಕ್ಕಿನ ಸುತ್ವಕ್ಕೇ ಜಂಗಮಲಿಂಗ, ನೇತ್ರದ ನೇತ್ರವೇ ಶಿವಲಿಂಗ, ಜಿಹ್ವೆಯ ಸುಜಿಹ್ವೆಯೇ ಗುರುಲಿಂಗ, ನಾಶಿಕದ ನಾಶಿಕವೇ ಆಚಾರಲಿಂಗ. ಅಂಗಾಂಗಗಳಲ್ಲಿ ಲಿಂಗಗಳನ್ನಳವಡಿಸಿ ಹೇಳಿದ



ನುಡಿಯಿದು. ಅಂಗಲಿಂಗೈಕ್ಯದ ಪರಿಯನ್ನು ಚೆನ್ನಬಸವ ಪುರಾಣದಲ್ಲಿ ಹೀಗೆ ಬಣ್ಣಿಸಿದೆ:

"ಶಶಿಮಂಡಲಂ ಜೊನ್ನವಾಗಸಂ ವಾಯು ವಾ।
ಕುಸುಮವಾ ಸುರಭಿ ಕರಕಾಂಭಸಂ ವಾಗರ್ಥ।
ವೆಸವ ದೀಪಂ ಬೆಳಗು ರತ್ನವಾ ಕಾಂತಿ ರಸ ರುಚಿಗಳೆಂದೆಂಬೆರಡರ ॥
ಬೆಸುಗೆಯಿಂದಾ ವಿಭಾಗಂಗಳೆಂತಂತೆ ರಾ।
ಜಿಸುತೆ ತಲ್ಲಿಂಗದಂಗದ ಸಂಗಯೋಗದಂ।
ತೆಸೆದುಭಯವಳಿದೇಕವಾದುದೈಕ್ಯಸ್ಥಲವೀದೀಗ ನೀಂ ಕೇಳೆಂದನು ॥"

ಈ ಸಾಮರಸ್ಯವನ್ನು ಬಸವಣ್ಣನವರು 'ಸಮರತಿ, ಸಮಕಳೆ, ಸಮಸುಖ, ನದಿಯೊಳಗೆ ನದಿ ಬೆರಸಿದಂತೆ, ಎಂದು ಬಣ್ಣಿಸಿದ್ದಾರೆ. ಆದರ ಸವಿಯನ್ನು ಶರಣರು ಮನವಾರೆ ಬಣ್ಣಿಸಿದ್ದಾರೆ. ಒಂದು ವಚನವನ್ನು ಮಾತ್ರ ಇಲ್ಲಿ ಆಯ್ದೆಯುವಾ:

ಗಾಳಿ ಗಂಧವನ್ನಪ್ಪಿದಂತೆ, ಬಯಲು ಬಯಲನ್ನಪ್ಪಿದಂತೆ,
ಬೆಳಗು ಬೆಳಗನ್ನಪ್ಪಿ, ಮಹಾ ಬೆಳಗಾದಂತೆ,
ಶರಣ ಲಿಂಗವನ್ನಪ್ಪಿ ಮಹಾಲಿಂಗವೇ ತಾನಾಗಿ ನಿರ್ವಯಲಾದನು
ನೋಡಾ ಮಹಾಲಿಂಗ ಗುರು ಶಿವ ಸಿದ್ಧೇಶ್ವರ ಪ್ರಭುವೇ'

ಲಿಂಗಾಂಗಸಾಮರಸ್ಯವೆಂಬ ಗಂಭೀರ ತತ್ವದ ಅರ್ಥವನ್ನು ಸವಿಯನ್ನು ಸನ್ನ ಅರೆತಿಳಿವಿನಿಂದಾಗಿ, ಅವಕಾಶದ ಅಭಾವದಿಂದಾಗಿ ನಾನು ತಮಗೆ ಸರಿಯಾಗಿ ಕೊಡಲಿಲ್ಲವಾದರೆ ಸಹನೆದೋರುವದು, ಸಸಿನೆಗೆಯ್ಯುವುದು.

(ಕೃಪೆ: ಆಕಾಶವಾಣಿ ಧಾರವಾಡ ನಿಲಯ.)

---

"ಅನುಭಾವ ಅನುಭಾವವೆಂದೆಂಬಿರಿ:
ಅನುಭಾವವೆಂಬುದು ನೆಲದ ಮರೆಯ ನಿಧಾನ ಕಾಣಿರೋ?
ಅನುಭಾವವೆಂಬುದು ಅಂತರಂಗದ ರತ್ನ ಕಾಣಿರೋ,
ಅನುಭಾವವೆಂಬುದು ಶಿಶು ಕಂಡ ಕನಸ ಕಾಣಿರೋ.

"ಆಯುಧವಿಕ್ಕಿದವಂಗೆ ವೀರದ ಮಾತೇಕೆ?
ಲಿಂಗವನಂತರಿಸಿದವಂಗೆ ಒಳನುಡಿಯೇಕೆ?
ಅಯಿದೆ-ಅಣಚಿಯಿಲ್ಲದವಳಿಗೆ ಸೌಭಾಗ್ಯದ ಹೂವಿನ ಬೊಟ್ಟೇಕೆ?
ಸತ್ಯನಲ್ಲದವಂಗೆ ನಿತ್ಯನೇಮವೇಕೆ?
ಕೂಡಲಸಂಗಮ ದೇವಯ್ಯಾ,
ನೀವಿಲ್ಲದವಂಗೆ ಶಿವಾಚಾರದ ಮಾತೇಕೆ?

— ಬಸವಣ್ಣನವರು.

# ಸೆಣಸಿ ಗಳಿಸಿದ ಸ್ವಾತಂತ್ರ್ಯ ನಮ್ಮದು

ಒಗ್ಗಟ್ಟಿನಿಂದ ಅದನ್ನು ರಕ್ಷಿಸಿಕೊಳ್ಳೋಣ, ಉಳಿಸಿಕೊಳ್ಳೋಣ.

ಎಲ್ಲಿ ಮನ ನಿರ್ಭೀತವೋ, ಎತ್ತಿದ ಶಿರವಲ್ಲಿ ಬಾಗದೋ
ಎಲ್ಲಿ ಜ್ಞಾನ ಸಂಚಯ ಮುಕ್ತ ಲಭ್ಯವೋ
ಎಲ್ಲಿ ವಿಶ್ವ ಛಿದ್ರ ಛಿದ್ರಗೊಂಡು, ಅತ್ತಲಿಂದ ಇತ್ತ ಒತ್ತುವ
ವಿಭಕ್ತ ಗೃಹದ ಗೋಡೆಗಳನ್ನು ಕಾಣದೋ
ಎಲ್ಲಿ ಸತ್ಯದರಿವಿನಾಳದಿಂದ ಪದ ಪುಂಜ ಸ್ತೋಮ ಹೊರ ಹೊಮ್ಮುವುದೋ
ಎಲ್ಲಿ ತೋಳ ತಕ್ಕೆಗೆ ಪರಿಪೂರ್ಣತೆಯು ಸೆಳೆವಂಥ
ಸತತ ಶ್ರಮದ ಗೆಯ್ಮೆ ಸಾಧ್ಯವೋ
ಎಲ್ಲಿ ಸ್ಫುಟ ವಿಚಾರ ಸ್ರೋತವೊಂದು ಜಡವೃತ್ತಿಯ
ಮರಳುಗಾಡು ಸೇರಿ ಇಂಗಿ ಹೋಗದೋ
ಎಲ್ಲಿ ನನ್ನ ಮನವು ನಿನ್ನ ಅಣತಿಯಂತೆ ವ್ಯಾಪನಶೀಲ
ವಿಚಾರವಾಗಿ ವಿಕಸನಗೊಳ್ಳುವದೋ, ಕಾರ್ಯತತ್ಪರಗೊಳ್ಳುವದೋ
ಓ ತಂದೆ, ಬಡಿದೆಬ್ಬಿಸಿ ನನ್ನ ದೇಶವನೊಯ್ಯಿ
ಆ ಸ್ವಾತಂತ್ರ್ಯದ ಸ್ವರ್ಗಕ್ಕೆ

—ರವೀಂದ್ರನಾಥ ಠಾಕೂರ್
(ಇಂಗ್ಲೀಷಿನಿಂದ ಅನುವಾದ)

ಭಾರತ ದಾಸ್ಯ ಶೃಂಖಲೆಯಿಂದ ಕಳಚಿಕೊಂಡಿತು. ವಸಹಾತು ಶಾಹಿ ಅಳಿದು; ಸ್ವತಂತ್ರ ರಾಷ್ಟ್ರ ಉದಯಿಸಿತು. ಎಳೆಹರೆಯದ ರಾಷ್ಟ್ರ ಉತ್ಸಾಹದಿಂದ ಪುಟಿಯುತ್ತಾ ಇಪ್ಪತ್ತನೆಯ ಶತಮಾನದ ಹಾದಿಯಲ್ಲಿ ತನ್ನ ಅಸ್ತಿತ್ವ ಅಚ್ಚೊತ್ತುವ ಭರವಸೆ ಮೂಡಿಸಿತು. ಸ್ವಾತಂತ್ರ್ಯ ಪಡೆದು ನಲವತ್ತು ಮಹತ್ತರ ವರ್ಷಗಳು ಮುಗಿದಿವೆ.

ಭಾರತ ಸ್ವಾತಂತ್ರ್ಯ ಹೋರಾಟದಲ್ಲಿ ಅನೇಕ ವ್ಯಕ್ತಿಗಳು ದೇಶಕ್ಕಾಗಿ ತಮ್ಮ ಜೀವತೆತ್ತು ಅಜರಾಮರರಾದರು. ಮಹಾತ್ಮಾಗಾಂಧಿ ಅವರ ಪಾತ್ರ ಮಹತ್ತರ. ಅಹಿಂಸೆಯೆಂಬ ಜೀವನ ತತ್ವದೊಂದಿಗೆ ದೇಶದ ಅಂತಃಕರಣವನ್ನು ವಶಪಡಿಸಿಕೊಳ್ಳಬಹುದೆಂಬುದನ್ನು ವಿಶ್ವಕ್ಕೆ ತೋರಿದ ಮಹಾನುಭಾವರು ಇವರು.

ವಿಶ್ವವೇ ಹೆಮ್ಮೆಪಡಬಹುದಾದ ಕೆಲವರು ಮಹಾನ್ ಪುರುಷರು ಸಮುದಾಯಕ ಜೀವದರ್ಶನದ ಫಲವಾಗಿ ಸ್ವತಂತ್ರ ಭಾರತ ಆಧುನಿಕ ಭಾರತ ಎನಿಸಿಕೊಂಡಿತು. ತಿಲಕ್; ಗೋಖಲೆ, ಗಾಂಧಿ, ರಾನಡೆ, ನೆಹರೂ ಹೀಗೇ ಇನ್ನಿತರರು ಇವರ ಶ್ರೇಣಿಗೆ ಸೇರುತ್ತಾರೆ. ಸಾಮಾಜಿಕವಾಗಿ, ಆರ್ಥಿಕವಾಗಿ ಮತ್ತು ರಾಜಕೀಯವಾಗಿ ಭಾರತ ಮೇಲೆ ಮೇಲಕ್ಕೆ ಏರಲು ಇವರೆಲ್ಲ ಎಡೆಬಿಡದೆ ಶ್ರಮಿಸಿದರು. ಎಲ್ಲರಿಗೂ ನ್ಯಾಯ ಸಂದಾಯವಾಗಬೇಕು. ಎಲ್ಲರೂ ಸಮಾನರು ಎಂದಾಗಬೇಕು. ನ್ಯಾಯಬದ್ಧ ನಡವಳಿಕೆ ಆದರ್ಶವಾಗಬೇಕು ಎನ್ನುವ ಮೌಲ್ಯಗಳಿಗೆ ಮನ್ನಣೆ ದೊರಕಿಸಿಕೊಟ್ಟರು.

ಈ ಬಗೆಯ ಭದ್ರ ಬುನಾದಿ ಇದ್ದುದರಿಂದಲೇ ಸ್ವಾತಂತ್ರ್ಯಾನಂತರ ಭಾರತದ ಅಭಿವೃದ್ಧಿಯ ವೇಗ ನಿಬ್ಬೆರಗಾಗುವಂತೆ ಹೆಚ್ಚಿತು. ಕೈಗಾರಿಕಾ ಕ್ಷೇತ್ರದ ಮತ್ತು ತಂತ್ರಜ್ಞಾನಗಳನ್ನು ಮಾತ್ರ ಬೆಳೆಸಲಿಲ್ಲ: ಗ್ರಾಮ ಜೀವನ ಸುಧಾರಣೆ ಮತ್ತು ಸಮಾಜಕಲ್ಯಾಣಸಹ ಸಾಧ್ಯವಾಗುವಂತೆ ಸುಯೋಜಿತ ಪ್ರಯತ್ನಗಳು ನಡೆದವು ಬಡತನ ಅನಕ್ಷರತೆ ರೋಗರುಜಿನಗಳ ವಿರುದ್ಧ ಹೋರಾಡಲು ಸಂಪನ್ಮೂಲಕ್ಕಾಗಿ ತಡಕಾಡುವ ತಾಣವೇ ಇಲ್ಲ.

ಸ್ವಾತಂತ್ರ್ಯ ಹೋರಾಟದಲ್ಲಿ ಕರ್ನಾಟಕವೂ ಧೀರೋದಾತ್ತ ಪಾತ್ರವಹಿಸಿತು. ಬ್ರಿಟಿಷರ ಬಿಗಿಮುಷ್ಟಿಯ ಆದಳಿತದ ವಿರುದ್ಧ ಬಂಡೆದ್ದ ಪ್ರಸಂಗಗಳು 1800 ರಷ್ಟು ಹಿಂದೆಯೇ ನಡೆದವು. ಇತಿಹಾಸದ ಪುಟಗಳಲ್ಲಿ ನಾಡಿನ ಈ ಭಾಗದ ರಾಷ್ಟ್ರ ಭಕ್ತರ ಸಾಹಸಚರ್ಯೆ ಅಚ್ಚೊತ್ತಿದಂತೆ ಮೂಡಿದೆ. ಕಿತ್ತೂರು ರಾಣಿ ಚೆನ್ನಮ್ಮ ಹೈದರ್ ಅಲಿ, ಟಿಪ್ಪುಸುಲ್ತಾನ್ ಇವರು ತೋರಿದ ಪ್ರತಿರೋಧ ಸದಾಕಾಲ ಸ್ಮರಣೀಯ; ಮುಂದೆ ಅಸಹಕಾರ ಚಳವಳಿ ಮತ್ತು ಅಹಿಂಸಾತ್ಮಕ ಆಂದೋಲನಗಳಲ್ಲಿ ಇಲ್ಲಿನ ಜನಸಮುದಾಯ ತಾನೇ ತಾನಾಗಿ ತೊಡಗಿಸಿಕೊಂಡಿತು, ಸಕ್ರಿಯವಾಗಿ ಪಾಲ್ಗೊಂಡಿತು.

ಸ್ವಾತಂತ್ರ್ಯ ಬಂದ ಮೇಲೂ ಶ್ರೀ ಸಾಮಾನ್ಯನ ಹಿತಸಾಧನೆಗೆ ಶ್ರಮಿಸಬೇಕೆಂಬ ಕರ್ನಾಟಕದ ಸರ್ವತ್ರ ಅಭಿಲಾಷೆಯು ರಾಷ್ಟ್ರೀಯ ತತ್ವಧಾರೆಯು ಬಿಂಬ ಸ್ವರೂಪವೇ ಆಗಿದೆ. ಸ್ವಾತಂತ್ರ್ಯದ ಫಲ ಏನಿದೆಯೋ ಅದನ್ನು ದುರ್ಬಲರಿಗೂ ಸಹಾ ಹಂಚಲು ಕರ್ನಾಟಕದಲ್ಲಿ ಒಂದಾದ ಮೇಲೆ ಒಂದರಂತೆ ಅಧಿಕಾರಕ್ಕೆ ಬಂದ ಸರ್ಕಾರಗಳು ಶಕ್ತಿ ಮೀರಿ ಶ್ರಮಿಸಿವೆ. ಪ್ರಸ್ತುತ ಸರ್ಕಾರವು ಸಮಾಜದ ದುರ್ಬಲ ವರ್ಗಗಳಿಗೆ ನೆರವಾಗುವ ವಿವಿಧ ಹೊಸ ಬಗೆಯ ಕಾರ್ಯಯೋಜನೆಗಳನ್ನು ಜಾರಿಮಾಡಿದೆ.

ಗ್ರಾಮ ರಾಜ್ಯದ ಬುನಾದಿಯ ಮೇಲೆ ಆಡಳಿತ ಸಾಧ್ಯವಾಗಬೇಕು ಎಂಬುದನ್ನು ಗಾಂಧೀಜಿಯವರ ಕನಸಾಗಿತ್ತು. ಆ ಕನಸನ್ನು ಪೂರ್ಣ ಪ್ರಮಾಣದಲ್ಲಿ ನನಸಾಗಿಸಲು ಶ್ರಮಿಸಿದ ಕರ್ನಾಟಕ ಸರ್ಕಾರಕ್ಕೆ ಸಂದಿದೆ. ಜಿಲ್ಲಾ ಪರಿಷತ್ತಿಗೆ ಈಚೆಗೆ ಚುನಾವಣೆ ಯಶಸ್ವಿ ಆಗಿ ನಡೆಯಿತು.

ನಲವತ್ತನೆಯ ಸ್ವಾತಂತ್ರ್ಯೋತ್ಸವ ಸಂಭ್ರಮದಲ್ಲಿ ಕರ್ನಾಟಕದ ಜನತೆ ಭಾರತದ ಜನರ ಜೊತೆ ಪಾಲ್ಗೊಳ್ಳುತ್ತಿದೆ. ಸ್ವಾತಂತ್ರ್ಯೋತ್ಸವ ಆಚರಣೆ ಜೊತೆಗೆ ನಮ್ಮೆಲ್ಲ ಸ್ವಾತಂತ್ರ್ಯ ಹೋರಾಟಗಾರರನ್ನು ಸ್ಮರಿಸಿ ಶ್ರದ್ಧಾಂಜಲಿ ಅರ್ಪಿಸುತ್ತದೆ.

ಇಂದು ಭಾರತ ಎದುರಿಸುತ್ತಿರುವ ಸವಾಲುಗಳ ಹಲವಾರು. ದೇಶವು ಒಂದಾಗಿ ಉಳಿಯುವಂತೆ ನೋಡಿಕೊಳ್ಳಬೇಕಾಗಿದೆ. ಉಗ್ರವಾದಿ ಮತ್ತು ಪ್ರತ್ಯೇಕತಾವಾದಿ ಶಕ್ತಿಗಳು ಅಲ್ಲಲ್ಲಿ ತಲೆ ಎತ್ತುತ್ತಿವೆ. ಇಂತಹ ಸಮಯದಲ್ಲಿ ಭಾರತದ ಜನರೆಲ್ಲರೂ ಒಗ್ಗಟ್ಟಾಗಿದ್ದು ನಾವೆಲ್ಲರೂ ಭಾರತೀಯರು ಎಂಬ ಭಾವೈಕ್ಯತೆಯನ್ನು ಸಂರಕ್ಷಿಸಿಕೊಳ್ಳುವುದೇ ಸದ್ಯದ ಪರಮ ಗುರಿ. ●

ಕರ್ನಾಟಕ ವಾರ್ತೆ

# ಗ್ರಾಮಾಂತರ ಬಸವ ಜಯಂತಿ

—ಹೆಚ್. ವಿ. ವೀರಭದ್ರಯ್ಯ

ಆತ್ಮೀಯ ಶರಣ ಬಂಧು,

ಕಡೂರು ತಾಲ್ಲೂಕಿನಿಂದ ಕನಕಪುರಕ್ಕೆ ನಮ್ಮ ಪ್ರಯಾಣಸಾಗಿತು. ಬಿಸಿಲೆರೆ ಗ್ರಾಮದಿಂದ ದೇಗುಲಮಠದ ಪವಿತ್ರ ಪರಿಸರಕ್ಕೆ ನೆಡೆದವು. ಬಸವತತ್ವ ಪ್ರಚಾರದ 189 ನೇ ಕಾರ್ಯ ಕ್ರಮವನ್ನು ಹಮ್ಮಿಕೊಳ್ಳುವ ಭಾಗ್ಯ ಒದಗಿತು. ದೇಗುಲ ಮಠ ಅರ್ಕಾವತಿಯ ತೀರದಲ್ಲಿ ಅರಳಿರುವ ವೀರಶೈವ ಧರ್ಮದ ವಿರಕ್ತ ಸಂಪ್ರಾದಾಯದ-ಮಠ. ಪೂಜ್ಯ ಶ್ರೀ ಶ್ರೀ ಮಹಾಲಿಂಗ ಸ್ವಾಮಿಗಳು ಸ್ಥಾನಪತಿಗಳು. ಅಂತೆಯೇ ಪೂಜ್ಯ ಶ್ರೀ ಶ್ರೀ ಮುಮ್ಮಡಿ ನಿರ್ವಾಣಸ್ವಾಮಿಗಳು ಶ್ರೀ ಮಠದ ಉತ್ತರಾಧಿಕಾರಿಗಳು. ಕಾಯಕಕ್ಕೆ ತಮ್ಮನ್ನು ಅರ್ಪಿಸಿಕೊಂಡ ತಾರುಣ್ಯದ ಹೊಂಬೆಳಕು ಅವರು.

ದಿನಾಂಕ 30 - 5 - 1986 ರಂದು ಬಸವ ಜಯಂತಿ ಶ್ರೀ ಮಠದ ಧಾರ್ಮಿಕ ಪರಿಸರದಲ್ಲಿ ತೆಂಗು ಕಂಗಳ ಪ್ರಶಾಂತ ವಾತಾವರಣ. ಪರಮ ಪೂಜ್ಯ ಶ್ರೀ ಶ್ರೀ ಶಿವಕುಮಾರ ಮಹಾ ಸ್ವಾಮಿಗಳವರ. ದಿವ್ಯ ಅಧ್ಯಕ್ಷತೆ, ರಾಜ್ಯದ ಸಾರಿಗೆ ಸಚಿವರಾದ ಶ್ರೀ ಪಿ. ಜಿ. ಆರ್. ಸಿಂಧ್ಯರಿಂದ ಉದ್ಘಾಟನೆ.

ಆಧುನಿಕ ತಪಸ್ವಿಗಳು ಪರಮ ಪೂಜ್ಯ ಸಿದ್ಧಗಂಗಾ ಶ್ರೀ ಶ್ರೀ ಗಳು ಎಂದು ಭಕ್ತಿನುಡಿಗಳನ್ನಾಡಿದ ಸಚಿವರು 800 ವರ್ಷಗಳ ಹಿಂದ ಬಸವಣ್ಣನವರು ಮಾಡಿದ ಸುಧಾರಣೆಗಳನ್ನು ಪರಮ ಪೂಜ್ಯರು ಮುಂದುವರಿಸಿದ್ದಾರೆ - ಕಾಯಕತತ್ವಕ್ಕೆ ಜೀವಂತ ಭಾಷ್ಯವಾಗಿದ್ದಾರೆ ಎಂದು ಮೆಚ್ಚುಗೆಯನ್ನು ವ್ಯಕ್ತಪಡಿಸಿದರು. ಬಸವಣ್ಣನವರದು ಬಹುಮುಖ ವ್ಯಕ್ತಿತ್ವ ಆದಿ ದೈವಿಕ, ಆದಿ ಭೌತಿಕ, ಆಧ್ಯಾತ್ಮಿಕವಾದದ್ದು ಅವರ ಬಾಳುವೆ. ಸಾಧನೆ, ಸಿದ್ಧಿಗಳಿಸಿದ ಬಸವಣ್ಣನವರು ಲೋಕಕ್ಕೆ ತಮ್ಮನ್ನು ಅರ್ಪಿಸಿಕೊಂಡ ಮಹಾಪುರುಷರು. ಸ್ತ್ರೀಯರ ಬಗ್ಗೆ ಇದ್ದ ಕೀಳರಿಮೆಯನ್ನು ಕಿತ್ತೊಗೆದರು. ನರಕದ ದಾರಿ ನಾರಿ ಎಂಬುದನ್ನು ಅಲ್ಲಗಳೆದು 'ಪರವಧುವನು ಮಹಾದೇವಿ ಯೆಂಬೆ' ಎಂದು ಗೌರವಿಸಿದವರು. ಕಾಮ, ಕಾಲ, ಕರ್ಮಗಳಿಂದ ಬಂಧಿತನಾದ ಸಂಸಾರಿ ಜೀವನಯೋಗವನ್ನು ಶಿವಯೋಗವಾಗಿ ಮಾರ್ಪಡಿಸುವ ಅಪೂರ್ವ ಕಲೆಯನ್ನು ತೋರಿಸಿ ಕೊಟ್ಟವರು ಬಸವಣ್ಣ. ಆಧ್ಯಾತ್ಮವನ್ನು ವಿಜ್ಞಾನದೊಂದಿ ಮೇಳವಿಸಿದ ವಿನೂತನ ಕಲಾವಿದ ಬಸವಣ್ಣ. 'ಕೆಟ್ಟವಂಗೆ ಕೆಳೆಯಿಲ್ಲ' ಎಂಬ ಅವರ ಲೋಕೋಕ್ತಿಯುಳ್ಳ ವಚನವನ್ನು ಉದಾಹರಿಸಿದರು ಉಪನ್ಯಾಸ ಮಾಡಿದ ಮೈಸೂರಿನ ಜೆ. ಎಸ್. ಎಸ್. ಕಾನೂನು ಕಾಲೇಜಿನ ಪ್ರಾಚಾರ್ಯರಾದ ಶ್ರೀ ಹೆಚ್. ಗಂಗಾಧರನ್‌ರವರು.



ರಾಜ್ಯದ ಕಂದಾಯ ಸಚಿವರಾದ ಶ್ರೀ ಬೊಮ್ಮಾಯಿಯವರು ಧರ್ಮಮತ್ತು ರಾಜಕೀಯ ಒಂದು ನಾಣ್ಯದ ಎರಡು ಮುಖಗಳು ಎಂಬುದನ್ನು ತೋರಿಸಿಕೊಟ್ಟ ಅದ್ಭುತವ್ಯಕ್ತಿ ಬಸವಣ್ಣನವರು. ನೀತಿಯ ನೆಲೆಗಟ್ಟಿನ ಮೇಲೆ ರಾಜಕಾರಣದಂಥ ಬದುಕನ್ನು ಬೆಳೆಸಿದವರು ಅವರು. ಅವರ ಬೋಧೆ ಎಂದಿಗಿಂತ ಇಂದು, ವೃದ್ಧರಿಗಿಂತ ಯುವ ಜನಾಂಗಕ್ಕೆ ಅಗತ್ಯ ಎಂದು ಹೇಳುತ್ತ – ಸಿದ್ಧಗಂಗಾ ಪರಮ ಪೂಜ್ಯರಿಂದ ನಾವು ಬಸವ ತತ್ವಾನುಸರಣೆಯನ್ನು ಕಲಿಯ ಬೇಕಾಗಿದೆ ಎಂದು ನುಡಿದರು.

ಬಸವಣ್ಣನವರ ಕಾಲಕ್ಕೆ ಆದ ಕ್ರಾಂತಿ ಇಂದೂ ಆಗಬೇಕಾಗಿದೆ. ಏಕೆ ದೇವೋಪಾಸನೆಯನ್ನು ಒತ್ತಿ ಹೇಳಿದ ಅವರು ಕ್ರಾಂತ ದರ್ಶಿಗಳಾಗಿದ್ದರು. ಸಾಮಾಜಿಕ ಪ್ರಗತಿ ಅದರಿಂದ ಸಾಧ್ಯ ಎಂಬ ರಹಸ್ಯ ತಿಳಿದಿದ್ದರು. ಆದರೆ ಇಂದು ವರ್ಗಭೇದ ಎದ್ದು ಕಾಣುತ್ತಿದೆ. ಗುರುವರ್ಗ, ವಿರಕ್ತವರ್ಗ, ಭಕ್ತವರ್ಗ, ಜಂಗಮ ವರ್ಗಗಳೆಂಬ ಒಳಗುಂಪುಗಳಾಗಿವೆ. ಇದು ಸಾಮಾಜಿಕ ರೋಗವಲ್ಲವೆ ? ಇದನ್ನು ಸಮಾಜದ ವಿಚಾರವಂತರು ಪರಿಹರಿಸುವ 'ಕಾಯಕ' ಕೈಗೆತ್ತಿ ಕೊಳ್ಳಬೇಕು ಎಂದು ಕಳಕಳಿಯಿಂದ ನುಡಿದರು ಮಾಜಿ ರಾಷ್ಟ್ರಪತಿಗಳಾದ ಶ್ರೀ ಬಿ. ಡಿ. ಜತ್ತಿಯವರು.

ಸುತ್ತೂರು ಶ್ರೀ ಮಠದ ಪೂಜ್ಯ ಜಗದ್ಗುರು ಶ್ರೀ ಶ್ರೀ ಶಿವರಾತ್ರಿ ರಾಜೇಂದ್ರ ಸ್ವಾಮಿಗಳವರು –" ಮಹಾತ್ಮರಂ ನೆನೆವುದೇ ಘನ ಮುಕ್ತಿ ಪದಂ ಶಿವಾಥವಾ –, ಎಂಬ ಮಗ್ಗೆಯ್ಯ ಮಾಯಿದೇವರ ಮಹಾವಾಕ್ಯವನ್ನು ಸ್ಮರಿಸುತ್ತ " ಕೆಂಚ ಕುರಿಕನ ನೆನೆದರೆ ಕರಿಕನಾಗ ಬಲ್ಲನೆ ? " ಎಂಬ ಬಸವಣ್ಣನವರ ವಚನವನ್ನು ವ್ಯಾಖ್ಯಾನಿಸುತ್ತ ಇಂದು ಬಸವ ತತ್ವಗಳು ಆಚರಣೆಗೆ ಬರಬೇಕಾಗಿದೆ ಎಂದು ಆಶೀರ್ವಚನ ನೀಡಿದರು. ಶ್ರೀ ದೇಗುಲ ಮಠಾಧ್ಯಕ್ಷರಾದ ಪೂಜ್ಯ ಶ್ರೀ ಶ್ರೀ ಮಹಾಲಿಂಗ ಸ್ವಾಮಿಗಳು ಬಸವಣ್ಣನವರನ್ನು ಹಿಂಬಾಲಿಸುವುದೊಂದೇ ನಮ್ಮ ಗುರಿ. ಒಳಗಿನ ಜಗತ್ತನ್ನು ಬೆಳಗುವ ಕಾರ್ಯ ನಮ್ಮದಾಗಬೇಕು. 'ತನ್ನ ಬಿಟ್ಟು ದೇವರಿಲ್ಲ, ಮಣ್ಣು ಬಿಟ್ಟು ಮಡಕೆಯಿಲ್ಲ' ಎಂದವರು ಬಸವಣ್ಣ ಎಂದು ಆಶೀರ್ವಚನ ಮಾಡಿದರು.

ಗುರು—ವಿರಕ್ತರು ಒಂದಾಗದ ತನಕ ಸಮಾಜಕ್ಕೆ ಭವಿಷ್ಯವಿಲ್ಲ ಎಂದು ಆಶೀ
ರುದ್ರಮುನಿಸ್ವಾಮಿಗಳು.
ರ್ವದಿಸಿದರು ಪೂಜ್ಯ ಶ್ರೀ ಶ್ರೀ ಕಾಲಾಗ್ನಿ
ಸಾಧಕರ ಬದುಕಿನಲ್ಲಿ ಅವರ ಧರ್ಮಪತ್ನಿಯರ ಪಾತ್ರ ಮಹತ್ವದ್ದಾಗಿರುತ್ತದೆ. ಬಸವಣ್ಣನವರ ಮನ-ಮನೆ ತುಂಬಿದ ಧರ್ಮಪತ್ನಿಯರು ಗಂಗಾಂಬಿಕೆ ನೀಲಾಂಕೆಯರು ಬಸವಣ್ಣನವರ ಸಂಸಾರ ಗುರುಲಿಂಗಜಂಗಮ ಪ್ರೇಮದಾಣವಾದುದು. ಗುರುಪ್ರಾಣಿಯಾದ ಗಂಗಾಂಬಿಕೆ ಲಿಂಗಪ್ರಾಣಿಯಾದ ನೀಲಾಂಬಿಕೆ ಜಂಗಮ ಪ್ರಾಣಿಯಾದ- ಬಸವಣ್ಣನವರಿಂದ ಧರ್ಮದ ಪರಿಭಾಷೆಗೆ ಪ್ರಾರರಸವೆರೆದಂತಾಯಿತು. ಅವರ ಕ್ರಿಯಾ ಶುದ್ಧಿ-ಸಿದ್ಧಿಗಳು ಅಮೂಲ್ಯ ಶಕ್ತಿಯನ್ನು ಸೃಷ್ಟಿಸಿದುವು ಎಂದು ಮೈಸೂರಿನ ಸಂಸ್ಕೃತ

ಕಾಲೇಜಿನ ನಿವೃತ್ತ ಪ್ರಾಚಾರ್ಯರಾದ ಶ್ರೀ . ಕೆ. ಎಂ ರೇವಣ್ಣ ಸಿದ್ಧಯ್ಯನವರು ಉಪನ್ಯಾಸಮಾಡಿದರು.

,ಬೋಧನೆಸಾಧನೆಗಳ ಅಖಂಡ ವ್ಯಕ್ತಿತ್ವ ಬಸವಣ್ಣನವರದು. ಕೊಲುವನೆಂಬ ಭಾಷೆ ದೇವನದು ಗೆಲುವೆನೆಂಬ ಭಾಷೆ ಭಕ್ತನದು ಎಂದ ದೀಮಂತ ಚೇತನ ಅಣ್ಣನವರದು. ನಾವಿಂದು ಬಸವಣ್ಣನವರನ್ನು ಪವಾಡಗಳಿಂದ ಮುಕ್ತನನ್ನಾಗಿಸ ಬೇಕಾಗಿದೆ. ಪವಾಡಗಳಿಂದಲೇ ಯಾರೂ ದೊಡ್ಡವರಾಗುವುದಿಲ್ಲ. ಪಾಪ-ಪುಣ್ಯವಾದಿಗಳಲ್ಲ ಅವರು ವಿಚಾರವಿಲ್ಲದ ಆಚಾರವ್ಯರ್ಥ ಆಚಾರವಿಲ್ಲದ ವಿಚಾರ ಶೂನ್ಯ ಎಂಬುವುದನ್ನು ತೋರಿಸಿದರು ಬಸವಣ್ಣ - ಬಸವತತ್ವ ಪ್ರಚಾರಕ್ಕೆಗೊಂಡಿರುವ ಪರಮ ಪೂಜ್ಯ ಶ್ರೀ ಶ್ರೀ ಗಳವರು ಆಚಾರವನ್ನು ವಿಚಾರದಿಂದ ಶುದ್ಧಿಗೊಳಿಸಿದಂಥವರು. ಜನಮನದಲ್ಲಿ ದೈವೀ ಶಕ್ತಿಯ ಉದ್ದೀಪನಕ್ಕಾಗಿ ಗ್ರಾಮಾಂತರ ಬಸವ ಜಯಂತಿ ಮಹಾಮಣಿಹವನ್ನು ನಡೆಸಿದ್ದಾರೆ ಸಿದ್ಧಗಂಗಾ ಪರಮಪೂಜ್ಯ ಶ್ರೀ ಶ್ರೀ ಗಳು ಎಂದು ಬೇಲಿಮಠದ ಪೂಜ್ಯ ಶ್ರೀ ಶ್ರೀ ಶಿವರುದ್ರಸ್ವಾಮಿಗಳವರು ಆಶೀರ್ವಚನ ನೀಡಿದರು.

ಭಕ್ತಮುಗ್ಧರಾದ ಹಳ್ಳಿಗರ ಹೃದಯಗಳಲ್ಲಿ ನೆರೆನಿಂತ ಬಸವಣ್ಣನವರ ಸುಂದರ ಚಿತ್ರವನ್ನು ಹಾಡುಗಳ ಮೂಲಕ ಸ್ವಷ್ಟಪಡಿಸಿದರು ಶ್ರೀ ಹೆಚ್. ವಿ. ವೀರಭದ್ರಯ್ಯನವರು.

ದೇಗುಲ ಮಠದ ಪರಂಪರೆಯನ್ನು ಸೇವಾವಣಿಹವನ್ನು ಸ್ಮರಿಸುವುದೇ ಒಂದು ಆನಂದ ಶ್ರೀ ಮಠದ ಅಭೂತಪೂರ್ವವಾದ ಸಂಪತ್ತು ಪೂಜ್ಯ ಶ್ರೀ ಮಹಾಲಿಂಗಸ್ವಾಮಿಗಳವರ ಆತ್ಮಸಂಪತ್ತು ಅನುಗ್ರಹಶಕ್ತಿಸಂಪನ್ನರಾದೂ ಪೂಜ್ಯರು ಹಸುವಿನಲ್ಲಿ ಹಾಲು ಕರೆದರೆ ಮರುದಿನ ಹಾಲು ವೃದ್ಧಿಯಾಗುತ್ತಿತ್ತು ಅಂತೆಯೇ ಸರಳ ಸಜ್ಜನಿಕೆಯ ಸಾಕಾರಮೂರ್ತಿಗಳಾದ ಶ್ರೀ ಶ್ರೀ ಮುಮ್ಮಡಿ ನಿರ್ವಾಣಸ್ವಾಮಿಗಳು ಶ್ರೀ ಮಠದ ಸ್ತಂಭದೀಪವಾಗಿದ್ದಾರೆ. ಇಲ್ಲಿ ಬಸವತತ್ವ ಗೋಷ್ಠಿ ನಡೆಯುತ್ತಿರುವುದು ಔಚಿತ್ಯ ಪೂರ್ಣವಾಗಿದೆ ಅರ್ಥಪೂರ್ಣವೆನಿಸಿದೆ. ಬಸವಣ್ಣನವರನ್ನು ಅಭ್ಯಾಸಮಾಡಿದಷ್ಟೂ ಗೌರವ ಮೂಡುತ್ತದೆ. ಪೂಜ್ಯಭಾವ ವೃದ್ಧಿಯಾಗುತ್ತದೆ. ಅಂಥವರು ಮತ್ತೆಉದಯವಾಗಲಿಲ್ಲ; ಅವರನ್ನು ಅರ್ಥಮಾಡಿಕೊಳ್ಳುವ ಪ್ರಯತ್ನ ಮಾಡಲಿಲ್ಲ ಈ ಜಗತ್ತು ಅನುದಿನದ ಬದುಕಿನ ನಡೆ-ನುಡಿಗಳನ್ನು ಕಲಿಯುವುದಕ್ಕಾಗಿ' ವ್ಯವಹಾರ ಜ್ಞಾನತಿಳಿಯುವುದಕ್ಕಾಗಿ ಅಂತರಂಗದ ಅನ್ವೇಷಣೆ ಅಭ್ಯಾಸಮಾಡಲಿಕ್ಕಾಗಿ ತಾಕಿಕ ಆಧ್ಯಾತ್ಮಿಕಗಳನ್ನು ಬೆಸೆಯುವುದನ್ನು ಅರಿಯುವುದಕ್ಕಾಗಿ ,ಜೀವನ ಒಂದು ಸುಂದರವಾದ ಕಲೆ ಎಂಬುವುದನ್ನು ಕಂಡುಕೊಳ್ಳುವುದಕ್ಕಾಗಿ, ಮರ್ತ್ಯವೆಂಬುದು ಕರ್ತಾರನ ಕಮ್ಮಟ ಅಲ್ಲಿ ತಯಾರಾದ ನಾಣ್ಯ ಮಾನವ ಎಂಬುದನ್ನು ಮನನಮಾಡುವುದಕ್ಕಾಗಿ ಮಾನವತಾವಾದಿಯಾಗಿ ಅಂಗ ಲಿಂಗವಾಗುತ್ತ ಜೀವ-ದೇವನಾಗುತ್ತ ಬೆಳೆಯುವುದಕ್ಕಾಗಿ



ಬಸವಣ್ಣನವರನ್ನು ಆರಾಧಿಸಬೇಕು ಅನುಸರಿಸಬೇಕು ವಿಶ್ವದ ಮಹಾಸಮಸ್ಯೆಗೆ ಅವರುಕೊಟ್ಟ ದಿವ್ಯ ಮಂತ್ರ ಕಾಯಕ ಮತ್ತು ಅದನ್ನು ಅನುಸರಿಸಿ ಬರುವ - ದಾಸೋಹ ಎಂಬುವುದಾಗಿ ಅಧ್ಯಕ್ಷಪೀಠದಿಂದ ಆಶೀರ್ವಚನನೀಡಿದರು ಪರಮ ಪೂಜ್ಯ ಶ್ರೀ ಶ್ರೀ ಗಳವರು.

ರಾತ್ರಿ ಹತ್ತು ಘಂಟೆಗೆ ಜಗಜ್ಯೋತಿ ಬಸವೇಶ್ವರ ನಾಟಕ ಅಭಿನಯವಾಯಿತು ಶ್ರೀ ಸಿದ್ಧಗಂಗಾ ಮಠದ ಶ್ರೀ ಸಿದ್ಧಲಿಂಗೇಶ್ವರ ನಾಟಕ ಮಂಡಳಿಯವರಿಂದ ಕಿಕ್ಕಿರಿದ ಜನಸಾಗರ, ಉಕ್ಕೇರಿದ ಭಕ್ತಿ ಸಾಗರ. ದೇಗುಲ ಮಠದ ಸೇವಾ ಶಿಖರವಾಯಿತು ಸಮಾರಂಭ. ನಾಟಕ ನೋಡಿದ ಅರ್ಕಾವತಿಯೂ ಜುಳು ಜುಳನೆ ಹರಿದುಳು 'ಹರಕರುಣೋದಯದಂತೆ ಅರುಣೋದಯವಾದಾಗ. ಕೂಟಗಲ್ಲಿನ ಯಜಮಾನರೊಬ್ಬರು ಬಸವಣ್ಣನರವರನ್ನು ಪ್ರತ್ಯಕ್ಷ ಕಂಡ ಹಾಗಾಯ್ತು, ಎಲ್ಲ ಸ್ವಾಮಿಗಳ ದಯೆ ಎಂದು ಮಠಾಧೀಶರೊಬ್ಬರ ಬಳಿ ಹೇಳುತ್ತಿದ್ದುದನ್ನು ವರದಿಗಾರ ಗಮನಿಸಿದಾಗ ಪರಮ ಪೂಜ್ಯ ಶ್ರೀ ಶ್ರೀ ಗಳವರ ದಾರ್ಶನಿಕ ನೋಟ ದೊಡ್ಡದು ಎಂಬುದು ಹೊಳೆದು ಹೃದಯ ತುಂಬಿ ಬಂದಿತು.

## ಮೌನ

ನಿಮ್ಮ ವೃತ್ತಿಗಳನ್ನು ತಡೆದು ಮೌನವಾಗಿರಿ.

ಮೌನವು ಶಕ್ತಿಯನ್ನು ಕಾಪಾಡುತ್ತದೆ. ಆತ್ಮ ಬಲವನ್ನು ಹೆಚ್ಚಿಸುತ್ತದೆ. ಮತ್ತು ಅಡಿಗಡಿಗೆ ಮಾತನಾಡುವ ಪ್ರವೃತ್ತಿಯನ್ನು ತಡೆಯುತ್ತದೆ.

ವ್ಯರ್ಥ ಮಾಡಿಕೊಳ್ಳುವ ವಾಕ್ ಶಕ್ತಿಯನ್ನು ಧ್ಯಾನದಲ್ಲಿ ವಿನಿಯೋಗಿಸಿದರೆ, ಭೂಮ್ಯಾಕಾಶಗಳನ್ನು ತಲೆ ಕೆಳಗು ಮಾಡಬಲ್ಲವನಾಗುತ್ತಾನೆ. ಬ್ರಹ್ಮವಾದಿನಿಗಳೂ ಸಹ ತಮ್ಮ ಸಾಧನಾರಂಭದಲ್ಲಿ ವಾಕ್ ಮೌನವನ್ನು ಆಚರಿಸಬೇಕು.

ಮೌನಧಾರಿಯಾದವನು ಜಪ- ಧ್ಯಾನ- ಮಂತ್ರ- ಬರುವಣಿಗೆ ಇತ್ಯಾದಿ ಗಳಲ್ಲಿ ನಿರತನಾಗಿರಬೇಕು, ನಿಜವಾದ ಮೌನವೆಂದರೆ ಮನೋಲಯ.

ಹರಟೆಯಿಂದ ಶಕ್ತಿ ವ್ಯಯವಾಗುತ್ತದೆ. ಮೌನದಿಂದ ಶಕ್ತಿ ಸಂಗ್ರಹವಾಗುತ್ತದೆ.

ಭೋಜನ ಕಾಲದಲ್ಲಿ ಮೌನವಾಗಿರಿ. ಮೌನದಿಂದ ಮೆದುಳು ಮತ್ತು ನರಗಳು ಅದ್ಭುತವಾಗಿ ಉಪಶಮನವಾಗುವುವು.

ಮೌನಾಚರಣೆಯಿಂದ ವಾಕ್‌ಶಕ್ತಿಯೂ ಓಜಸ್ ಶಕ್ತಿಯಾಗುವುದು.

(ಕೃಪೆ : ದಿವ್ಯ ಜೀವನ)

# ಸಿದ್ಧಗಂಗಾ


ಸಂಪುಟ–೨೩ ಸಂಚಿಕೆ–೮ ಆಗಸ್ಟ್, ೧೯೮೭


## ಶ್ರೀ ಸಿದ್ಧಗಂಗಾ ಗುರುಕರುಣಾ ತ್ರಿವಿಧಿ.

ನಾಯಿ ಬೆಕ್ಕುಗಳನ್ನು ಎದೆಗಪ್ಪುವ ಜನರುಂಟು
ತಾಯಿ ಲಿಂಗವನು ಬಿಡುವರು । ನನ್ನ ತಂದೆ
ಸಿದ್ಧಗಂಗಾ ಗುರುವೆ ಕೃಪೆಯಾಗು ॥

• • •

ಕಾಗೆ ಕೋಳಿಗಳಲ್ಲಿ ಇರುವ ಜೀವನಪ್ರೀತಿ
ಕಾಣದು ಮಾನವ ಜಗದೊಳಗೆ । ನನ್ನ ತಂದೆ
ಸಿದ್ಧಗಂಗಾ ಗುರುವೆ ಕೃಪೆಯಾಗು ॥

• • •

ಎತ್ತು ಕತ್ತೆಗಳಲಿ ಕಾಂಬ ಕಾಯಕತತ್ತ್ವ
ಉತ್ತಮನೆನಿಸಿದ ಜೀವನೊಳು । ಬತ್ತಿಹುದು
ಸಿದ್ಧಗಂಗಾ ಗುರುವೆ ಕೃಪೆಯಾಗು ॥

—ಹೆಚ್.ವಿ. ವೀರಭದ್ರಯ್ಯ.

# ಈ ಸಂಚಿಕೆಯಲ್ಲಿ



# ಶ್ರೀವಾಣಿ

ಸರ್ವ ಅಶಾಂತಿಗೂ ಮೂಲ ಮಾನವನ ಹೃದಯ ಅವನ ಮನಸ್ಸು ಜಗ
ತ್ತಿನಲ್ಲಿ ಶಾಂತಿಯು ಒಡಮೂಡಿ ನೆಲಸಬೇಕಾದರೆ ವ್ಯಕ್ತಿಗಳ ಆತ್ಮ ವಿಕಾಸವಾಗ
ಬೇಕು. ಹೃದಯಗಳು ಅರಳಬೇಕು. : ಮನಸ್ಸುಗಳು ಪವಿತ್ರವಾಗಬೇಕು.
ಮಾನವನ ಬಾಹ್ಯ ವ್ಯಾಪಾರಗಳೆಲ್ಲಕ್ಕೂ ಅವನ ಭಾವನೆಗಳು ಮತ್ತು ಮನಸ್ಸೇ
ಮೂಲ. ಭಾವದಲ್ಲಿ ಸೆಲೆಯೊಡೆದು ಮನಸ್ಸಿನಲ್ಲಿ ಉದ್ಭವವಾಗುತ್ತಕ್ಕ ವಿಚಾರ
ಗಳು ಮಾತಿನ ಸ್ವರೂಪದಲ್ಲಿಯೂ ಕೃತಿಯ ಸ್ವರೂಪದಲ್ಲಿಯೂ ವ್ಯಕ್ತವಾಗು
ತ್ತದೆ. ಮನಸ್ಸು ಪರಿಶುದ್ಧವಾದರೆ ಭಾಷೆಗೆ ಗಾಂಭೀರ್ಯ, ಕೃತಿಗೆ ಸೊಬಗು
ಉಂಟಾಗುತ್ತದೆ. ಮೊದಲು ಮನಸ್ಸನ್ನು ಪವಿತ್ರಗೊಳಿಸಬೇಕು. ಮನಸ್ಸು
ಚಂಚಲ ಸ್ವಭಾವವುಳ್ಳದ್ದು. ವಿಷಯದಿಂದ ವಿಷಯಕ್ಕೆ, ವಸ್ತುವಿನಿಂದ
ವಸ್ತುವಿಗೆ, ವಿಚಾರದಿಂದ ವಿಚಾರಕ್ಕೆ ಧಾವಿಸುವುದು ಅದರ ಸ್ವಭಾವವಾಗಿದೆ.
ಅರ್ಜುನನು ಶ್ರೀ ಕೃಷ್ಣನನ್ನು ಚಂಚಲಂ ಹಿಮನ: ಕೃಷ್ಣ ಪ್ರಮಾಥಿ ಬಲ
ವದ್ಧೃಥಂ । ತ ಸ್ಯಾಹಂ ನಿಗ್ರಹಂ ಮನ್ಯೇ ವಾಯೋನಿವ ಸುದಷ್ಕರಂ ॥ ಎಂದು
ಪ್ರಶ್ನೆ ಮಾಡುತ್ತಾನೆ. ಧರೆಯನ ಜಿನದಂತೆ ಸುರುಳಲಹದು, ಮೇನು ಗಿರಿ
ಯನಂ ಗುರಿಯ ಕೊನೆಯ ಲಾಳಲಹುದು, ಶರಧಿಯನ್ನೊಮ್ಮೆ ಪಾನವ ಮಾಡ
ಲಹುದು ಸ್ಥೈತಿರಿಸಬಾರದು ನಿಮಿಷಾರ್ಧಮೀ ಮನವನು ಎಂದು ನಿಜಗುಣ
ಶಿವಯೋಗಿಗಳು ಹಾಡಿದ್ದಾರೆ. ಮನವೆಂಬ ಮರ್ಕಟನ ತಡೆಯಲಾರೆನು ದೇವ
ಎನಿತಿದರ ಚಪಲ ಚೇಷ್ಟೆಗಳ ವರ್ಣಿಸಲಿ ಎಂದು ಸರ್ಪಭೂಷಣ ಶಿವಯೋಗಿಗಳು
ಕೊಂಬೆಯ ಮೇಲಣ ಮರ್ಕಟನಂತೆ ಲಂಘಿಸುವುದೆನ್ನ ಮನವು, ಹೊಂದಿದಲ್ಲಿ
ಹೊಂದಲೀಯದೆನ್ನ ಮನವು, 'ನಿಂದಲ್ಲಿ ನಿಲ್ಲಲೀಯದೆನ್ನ ಮನವು' ಎಂದು
ಬಸವಣ್ಣನವರೂ ಮನಸ್ಸಿನ ಚಂಚಲ ಸ್ವಭಾವವನ್ನು ಕುರಿತು ಹೇಳಿದ್ದಾರೆ.
ಮನೋನಿಗ್ರಹವು ದುಸ್ಸಾಧ್ಯವಾದರೂ ನಿರಂತರ ಅಭ್ಯಾಸದಿಂನ ಅದನ್ನು ಹದ
ಗೊಳಿಸಬಹುದು. ಅದರ ಸ್ವಚ್ಛಂದ ಪ್ರವೃತ್ತಿಯನ್ನು ನಿರೋಧಿಸಬಹುದು.
ವಿಧಿ ನಿಷೇಧಾತ್ಮಕ ವ್ರತಗಳೆಲ್ಲವೂ ಮನಸ್ಸನ್ನು ಸಂಯಮಗೊಳಿಸುವುದಕ್ಕಾ
ಗಿಯೇ. ಮನಸ್ಸಿನ ಪ್ರವೃತ್ತಿಯನ್ನು ತಡೆಯುವುದೆಂದರೆ ಅದನ್ನು ನಿರ್ವಿಷಯ
ವಾಗಿ ಮಾಡುವುದೆಂದಲ್ಲ, ಮನಸ್ಸು ನಿರ್ವಿಷಯವಾಗಲಾರದು. ಅದರ ಪ್ರವ
ತ್ತಿಯು ಸದ್ವಿಷಯಗಳ ಚಿಂತನೆಯಲ್ಲಿ, ದೇವನ ಧ್ಯಾನದಲ್ಲಿ ಪ್ರವಹಿಸುವಂತೆ
ಪರಿವರ್ತನೆ ಮಾಡುವುದೇ ಸಂಯಮದ ಅರ್ಥ. ●

"ಸಿದ್ಧಗಂಗಾ" ಮಾಸ ಪತ್ರಿಕೆ
ಶ್ರೀ ಸಿದ್ಧಗಂಗಾ ಮಠ-572104
ತುಮಕೂರು ಜಿಲ್ಲೆ

ಪ್ರಧಾನ ಸಂಪಾದಕರು
ಪಂ। ಚನ್ನಪ್ಪ ಎರೇಸೀಮೆ
ಸಂಪಾದಕರು
ಹೆಚ್. ವಿ. ವೀರಭದ್ರಯ್ಯ

* * *

ಸಹ ಸಂಪಾದಕರು
ಬಿ. ವೀರಭದ್ರಯ್ಯ
ಟಿ. ಎನ್. ಚಂದ್ರಶೇಖರಯ್ಯ

* * *

ಜಾಹೀರಾತು ವಿಭಾಗ
ಎಂ. ರೇಣುಕಾರಾಧ್ಯ

* * *

ಪ್ರಸಾರ ವಿಭಾಗ
ಆರ್. ಎಸ್. ಮಲ್ಲೇಶಪ್ಪ

* * *

ಪ್ರಕಾಶಕರು
ಹೆಚ್.ಬಿ. ಗಂಗಾಧರಯ್ಯ
ಹಳೆಯ ವಿದ್ಯಾರ್ಥಿ ಸಂಘದ ಪರವಾಗಿ

* * *

ಮುದ್ರಕರು
ಶ್ರೀ ಸಿದ್ಧಲಿಂಗೇಶ್ವರ ಸ್ವಾಮಿ
ಮುದ್ರಣಾಲಯ

* * *

ಪ್ರಕಟಣೆಯ ಸ್ಥಳ
ಶ್ರೀ ಸಿದ್ಧಗಂಗಾ ಕ್ಷೇತ್ರ

ಚಂದಾ ವಿವರ
ವಾರ್ಷಿಕ ಚಂದಾ 20-00 ರೂ
ಆಜೀವ ಸದಸ್ಯತ್ವ 201-00 ರೂ

### ಲೇಖಕರಲ್ಲಿ ಮನವಿ

'ಸಿದ್ಧಗಂಗಾ' ನಾಡಿನ ಜನತೆಗೆ ಜ್ಞಾನ ದಾಸೋಹ ವಿತರಣೆಯ ಕೆಲಸದಲ್ಲಿ ತೊಡಗಿರುವ ಪ್ರಸಿದ್ಧ ಮಾಸಪತ್ರಿಕೆಯಾಗಿದೆ. ಈ ಉದ್ದೇಶ ಸಾಧನೆಗಾಗಿ ನಾಡಿನ ಗಣ್ಯ ಲೇಖಕರಿಂದ ಸಾಹಿತ್ಯ, ಸಂಸ್ಕೃತಿ, ಕೃಷಿ ಜೀವನ, ಕಲೆ, ವಿಜ್ಞಾನ, ಶಿಕ್ಷಣ, ರಾಜನೀತಿ, ಧರ್ಮ, ದರ್ಶನ, ಇತಿಹಾಸ ವೈಚಾರಿಕ, ಚಿಂತನ, ನಗೆಬರೆಹ, ಹರಟೆ ಮುಂತಾದ ಲೇಖನಗಳನ್ನು ಸದಾ ಸ್ವಾಗತಿಸುತ್ತದೆ. ಲೇಖನಗಳು ಫುಲ್ ಸ್ಕೇಪ್ ಸೈಜಿನ ಕಾಗದದ ಒಂದೇ ಮಗ್ಗುಲಲ್ಲಿ ಸ್ಪಷ್ಟವಾಗಿ ಬರೆದಿರಬೇಕು. ಅಸ್ವೀಕೃತ ಲೇಖನಗಳನ್ನು ಪಡೆಯಲು ಸಾಕಷ್ಟು ಅಂಚೆಚೀಟಿಯನ್ನು ಲಗತ್ತಿಸಬೇಕು. ಲೇಖನಗಳು ಅಕಸ್ಮಾತ್ ಕಳೆದು ಹೋದರೆ ಸಂಪಾದಕರು ಹೊಣೆಗಾರರಲ್ಲ. ಲೇಖನಗಳಲ್ಲಿ ಸೂಕ್ತ ಬದಲಾವಣೆ ಮಾಡಿಕೊಳ್ಳುವ ಅಧಿಕಾರ ಸಂಪಾದಕರಿಗಿದೆ. ಈ ಬಗ್ಗೆ ಪತ್ರವ್ಯವಹಾರಕ್ಕೆ ಅವಕಾಶವಿಲ್ಲ. ಅನುವಾದ, ರೂಪಾಂತರ ಲೇಖನಗಳಿಗೆ ಮೂಲ ಕೃತಿಕಾರರ ಅನುಮತಿ ಪಡೆದಿರಬೇಕು. ಸ್ವೀಕೃತ ಲೇಖನದ ಪ್ರಕಟಣೆಗೆ 'ಸಿದ್ಧಗಂಗಾ' ಆಗಿಂದಾಗ್ಗೆ ನಿಗದಿ ಪಡಿಸಿರುವ ಸಂಭಾವನೆಯನ್ನು ಕಳುಹಿಸಿಕೊಡಲಾಗುವುದು. ಸ್ಥಿರ ಶೀರ್ಷಿಕೆ ಪಡೆಯಲಿಚ್ಛಿಸುವ ಬರಹಗಾರರಿಗೆ ಆದ್ಯತೆ ಕೊಡಲಾಗುವುದು

"ಸಂಪಾದಕರು"
'ಸಿದ್ಧಗಂಗಾ' ಕನ್ನಡ ಮಾಸ ಪತ್ರಿಕೆ
ಶ್ರೀ ಸಿದ್ಧಗಂಗಾ ಕ್ಷೇತ್ರ-572104
ತುಮಕೂರು ಜಿಲ್ಲೆ
ಇವರಿಗೆ ಕಳುಹಿಸಿಕೊಡಬೇಕಾಗಿ ಪ್ರಾರ್ಥನೆ



# ಸಂಪಾದಕೀಯ

## ಇದು ಶಿವಪಥವೆ ?

ಇಲ್ಲ. ಗುರುಪಥವನರಿಯಲಿಲ್ಲ. ಗುರುವನರಿಯಲಿಲ್ಲ. ಬರೀ ಕಾಲಹರಣ ಮಾಡಿದ್ದಾಯಿತು. ಗರಿಕೆದರಿ ಗರುಡನಂತೆ ಹಾರಾಡುವ ಅಪೂರ್ವ ಅವಕಾಶ ಲಭ್ಯವಾಯಿತು. ಆದರೂ ಆ ಸಂಕಲ್ಪ ಮೂಡಿಬರಲಿಲ್ಲ. ಗುರುನಡೆದ ಹಾದಿ ಅದ್ಭುತ ಅಡ್ಡಿ ಆತಂಕಗಳಿಂದ ತುಂಬಿದ್ದು. ಆ ಪಥ ಶಿವಪಥಗಾಮಿಯಾದುದು. ಗುರುಕೊನೆಯವರೆವಿಗೂ ಪ್ರಾರ್ಥಿಸಿದ್ದು "ಶಕ್ತಿಯಕೊಡು ಶಕ್ತಿಯಕೊಡು ಶಕ್ತಿಯಕೊಡು ಪ್ರಭು ಸತ್ಯಕ್ಕಾಗಿ ನಿಲುವ ಛಲವ ದೀಪ್ತಗೊಳಿಸು ನನ್ನೊಳು" ಎಂಬುದಾಗಿ ಆತ್ಮವಿಶ್ವಾಸದ ಮಹಾಮೇರುವಾಗಿ ಎದ್ದು ನಿಂತರು. ಲೋಕವೇ ತನ್ನಡೆಗೆ ನೋಡುವಂತೆ ನಡೆದರು. ಚಾರಿತ್ರ್ಯ ಶುದ್ಧಿಯ ಪವಿತ್ರ ಸಂಪುಟವನ್ನು ಬರೆದರು. ಅವರ ಹೆಜ್ಜೆಯಲ್ಲಿ ಹೆಜ್ಜೆ ಇಟ್ಟಿದ್ದರೆ ಕೋಡು ಮೂಡುತ್ತಿತ್ತು- ಹಾಗಾಗಲಿಲ್ಲ. ದೊಡ್ಡದನ್ನು ಅರ್ಥಮಾಡಿಕೊಳ್ಳಲೂ ದೊಡ್ಡತನವಿರಬೇಕು. ಜಲವತಪ್ಪಿದ ಮತ್ಸ್ಯ ಜಲವನೂರಿದರೆಂತು ? ಜಲದ ನೆಲೆಯನರಿಯಬಾರದೆ. ? ಗುರುವನ್ನರಿಯದೆ ಶಿವನನ್ನರಿಯಬಹುದೆ ? ಗುರುಪಥವ ಮರೆದರೆ ಶಿವಪಥವ ಕಾಣಬಹುದೆ? ಶರಣರು ಒಳ-ಹೊರಗು ಶುದ್ಧತೆಯನ್ನು ಕಾಪಾಡಿಕೊಂಡವರು ಪರಂಪರೆಯನ್ನು ಗೌರವಿಸಿದರು. ಸ್ಥಾನಕ್ಕೆಂದೂ ಹಂಬಲಿಸಿದವರಲ್ಲ, ಮಾನಕ್ಕಾಗಿ ಪ್ರಾಣ ಪಣವಿಟ್ಟವರು. ಗುರುವಿಗಾಗಿ ತನು ಮನಧನಗಳನ್ನೆಲ್ಲಾ ಅರ್ಪಿಸಿದವರು. ಗುರು ತನಗೆ ಲಿಂಗವ ತೋರಿದಾತ. ಗುರು ತನಗೆ ಜಂಗಮವ ತೋರಿದಾತ ಎಂದು ನಂಬಿದವರು. ಗುರುವಿಗೆಂದೂ ಎದುರು ನುಡಿದವರಲ್ಲ, ಎದುರುನಿಂತವರಲ್ಲ. ಆದರೆ ಇಂದು ಬಂದ ಕಾಲಗುಣವೋ ಎಂಬಂತೆ ಎಲ್ಲ ತಿರುವು-ಮುರುವು. ಕೈ ಹಿಡಿದು ಕರೆತಂದ ಗುರುವನ್ನೇ ವಿರೋಧಿಸುವಂಥ ಚಟುವಟಿಕೆಗಳು ಗುರುವಿನ ಸೇವಾಮಣಿಹವನ್ನು ಅಗೌರವಿಸುವಂಥ ಮನೋಧರ್ಮ. ಇದು ಶಿವಪಥಕ್ಕೆ ದಾರಿ ತೋರಿಸಬಲ್ಲುದೆ ?

# ಮಾಣಿಕ್ಯ ದೀಪ್ತಿ

## ಭಕ್ತಿಯ ವಿಕಾಸವೆಂದರೇನು?

ನಾಗರಿಕತೆಯಂತೆ ಭಕ್ತಿಯು ವಿಕಾಸವಾಗುತ್ತಾ ಬಂದಿದೆ. ಭಯದಲ್ಲಿ ಹುಟ್ಟಿ ಅಜ್ಞಾನದ ರೂಢಿಯಲ್ಲಿ ಪರಿಣಮಿಸಿತು. ಅನಾಗರೀಕನ ಭಕ್ತಿ. ಚಿಕ್ಕಲಾಚೈತನ್ಯದ ಶ್ರದ್ಧೆಯಲ್ಲಿ ಹುಟ್ಟಿ ಜ್ಞಾನದಲ್ಲಿ ಬೆಳೆದು, ಸಮರಸಾನಂದದಲ್ಲಿ ಪರಿಣಮಿಸಿತು. ಶರಣರ ಭಕ್ತಿ. ಶರಣನು ಸುಸಂಸ್ಕೃತನಾದ, ಚಿತ್ಕಲಾಚೈತನ್ಯಯದಲ್ಲಿ ಸಮರಸನಾದ ಮಹಾಜೀವಿಯು. ಇಂಥ ಮಹಾಜೀವಿಗಳೇ ಜನಜೀವನದ ಮಂದಿರವನ್ನು ಕಟ್ಟಿ, ಜನ ಜೀವನದ ಅಂತಃಪ್ರಭೆಯನ್ನು ಬೆಳಗಿಸಬಲ್ಲರು ವೈಯಕ್ತಿಕ ಜೀವನ ಮತ್ತು ಸಾಮಾಜಿಕ ಜೀವನಗಳ ಸಂಗಮದಲ್ಲಿ ಶರಣರ ಭಕ್ತಿಯು ವಿಕಾಸವಾಯಿತು. ಮಾನವತೆಯು ಅರಳಿತು. ದೇಗುಲದೊಳಗೆ ಭಾವ ಸಿಂಹಾಸನವ ಮಾಡಿ ಜೀವ ದೊಡೆಯನೊಡನೆ ಸಮರಸಹೊಂದಿ" ಜಗತ್ಕಲ್ಯಾಣ ಸಾಧಿಸುವದೇ ವಿಕಸಿತ ಭಕ್ತಿಯ ಅಥವಾ ಪೂರ್ಣ ಭಕ್ತಿಯ ಲಕ್ಷಣ.

ಶರಣರು ದೇಹ, ಮನ, ಆತ್ಮಗಳನ್ನು ತಿರಸ್ಕರಿಸುವುದಿಲ್ಲ. "ಕಾಯದ ಸಂಗವ ವಿವರಿಸಬಲ್ಲಡೆ, ಕಾಯದ ಸಂಗವೇ ಲೇಸು ಕಂಡಯ್ಯ" "ಕೂಡಲ ಸಂಗನ ಪ್ರಸಾದ ಕಾಯ! ಅದ ಕೆಡಿಸಬಾರದು." "ನಿಮ್ಮ ನೆನೆವ ಮನವ ಕಿರಿದೆನ್ನ ಬಹುದೇ ? ಬಾರದಯ್ಯಾ ?" "ಕೂಡಲಸಂಗಯ್ಯನಲ್ಲಿ ಕರ್ಮಫಲಗೂಡಿ, ಆತ್ಮ ನೈವೇದ್ಯವ ಮಾತಾಡುವಾತನೇ ಜಾಣ ನೋಡಾ? ಕಾಯ, ಮನ, ಆತ್ಮಗಳು ಪರಮೇಶ್ವರನ ನೈವೇದ್ಯವು. ಇದೇ ಸರ್ವಾರ್ಪಣಯೋಗ; "ಅಂತರಂಗದಲ್ಲಿ ಸಮ್ಯಕ್ ಜ್ಞಾನ, ಬಹಿರಂಗದಲ್ಲಿ ಸತ್ಕ್ರಿಯಾಚರಣೆಯುಳ್ಳಾತನೇ ಶರಣನೋಡಾ. "ನೂರು ವರುಷ ತುಂಬಿತ್ತೇಬ ಆನಂದಭಕ್ತರ ತೋರಿ ಬುದಕಿಸಯ್ಯ ಕಾಯ, ಮನ, ಆತ್ಮಗಳನ್ನು ಚೆಂದ ಮಾಡಿಕೊಂಡು ಆನಂದದಿಂದ ನೂರು ವರ್ಷ ಇರ ಬೇಕು! ಇದೇ ಶರಣರ ಹಾರೈಕೆ. ಕಾಯ, ಮನ, ಆತ್ಮಗಳು ಪರಮೇಶ್ವರನ ಪ್ರತಿಬಿಂಬಗಳಾದರೆ ಚೆಲುವು ಪಡೆಯುತ್ತವೆ. ಇಂಥ ಚೆಲುವು ಸಂಸ್ಕೃತಿಯ ಜೀವಾಳವು. "ಬೇಡಿದರೆ ನುಡಿ ಕಿರಿದು." ಬಯಕೆಗೆ ತಕ್ಕ ಬದುಕು ನೀಡದಿರುವದೇ ಮನದ ಕಿರಿಯತನ. ಅರುಹು ಇಲ್ಲದಿಹುದೇ ಆತ್ಮನ ಕಿರಿತನ. ಕಾಯಕವಿಲ್ಲದೆ, ಆಲಸ್ಯದಿಂದ, ಪರಾವಲಂಬನೆಯಿಂದ ಇದ್ದರೆ ನಡೆ ಕಿರಿದು. ಈ ಕಿರಿಯತನವ ಕಳೆದು ಹಿರಿದು ಮಾಡುವುದೇ ಬಕುತಿಯ ಹಿರಿಮೆ. ಜಗತ್ತಿಗೆ ಇಂದು ಇಂಥ ಹಿರಿಯ ಜೀವನ ಅಥವಾ ನವಜೀವನ ಬೇಕು!

## ಶ್ರದ್ಧಾಂಜಲಿ

೧ ಕನಕಪುರ ಶ್ರೀ ದೇಗುಲ ಮಠಾಧ್ಯಕ್ಷರಾದ ತ್ರಿವಿಧ ದಾಸೋಹ ಮೂರ್ತಿಗಳೂ, ತಪೋಧನರೂ, ಶಿವಯೋಗ ಪ್ರೇಮಿಗಳೂ, ಭಕ್ತಿ ಭಾಸ್ಕರರು ಆದ ಪೂಜ್ಯ ಶ್ರೀ ಶ್ರೀ ಮಹಾಲಿಂಗಸ್ವಾಮಿಗಳವರು ತಾ. 16 - 8 - 87 ರಂದು ಲಿಂಗೈಕ್ಯರಾದುದು ‹‹ ಸಿದ್ಧಗಂಗಾ ›› ಕ್ಕೆ ತುಂಬ ದು:ಖ ದಾಯಕವಾದ ಸುದ್ದಿ. ಪರಮ ಪೂಜ್ಯರ ಅಗಲಿಕೆಯಿಂದ ಭಕ್ತ ಕೋಟಿಗೆ ತುಂಬ ಲಾರದ ನಷ್ಟವಾಗಿದೆ. ಲಿಂಗದಲ್ಲಿ ಮಹಾಲಿಂಗವಾದ ಶ್ರೀ ಶ್ರೀ ಗಳವರ ಆಶೀರ್ವಾದ, ಬೆಳಕು ಭಕ್ತ ಕೋಟಿಯನ್ನು ಮುನ್ನಡೆಸ ಬೇಕಾಗಿದೆ. ಪೂಜ್ಯರ ಆತ್ಮಕ್ಕೆ ಭಕ್ತಿ ಪೂರ್ವಕ ಶ್ರದ್ಧಾಂಜಲಿಯನ್ನು ‹‹ ಸಿದ್ಧಗಂಗಾ ›› ಅರ್ಪಿಸುತ್ತದೆ.

## ನಾ. ಕಸ್ತೂರಿ

೨ ಕನ್ನಡ ಸಾಹಿತ್ಯದಲ್ಲಿ ಹಾಸ್ಯ ಬ್ರಹ್ಮರೆಂದು ಪ್ರಸಿದ್ಧರಾದನಾ. ಕಸ್ತೂರಿ 14 - 8 - 1987ರಂದು ದಿವಂಗತ ರಾದುದನ್ನು ತಿಳಿದು "ಸಿದ್ಧಗಂಗಾ" ಶೋಕ ತಪ್ತವಾಗಿದೆ. ದಿವಂಗತರು ವಿಶ್ವವಿದ್ಯಾನಿಲಯದ ದೀರ್ಘ ಸೇವೆಯ ನಂತರ ಸತ್ಯಸಾಯಿ ಬಾ ಬಾ ಆಶ್ರಮದಲ್ಲಿ ಸಮಾಜ ಸೇವಾಕರ್ತರಾಗಿ ಸೇವೆ ಗೈಯುತ್ತಿದ್ದರು. ಕನ್ನಡ ಸಾಹಿತ್ಯದಲ್ಲಿ ಹಾಸ್ಯಕ್ಕೆ ಹೊಸದಿಕ್ಕನ್ನು ತೋರಿಸಿದವರು. ಸರಳ, ನಿರಾಡಂಬರ ಜೀವನ ಅವರದಾಗಿತ್ತು. ನಾ. ಕಸ್ತೂರಿ ಅವರ ನಿಧನ ದಿಂದ ಕನ್ನಡದ ಸಾಹಿತ್ಯಕ್ಕೆ ತುಂಬಾ ನಷ್ಟವಾಗಿದೆ ಎಂಬುದು ಔಪಚಾರಿಕವಾದ ಮಾತಲ್ಲ. ದಿವಂಗತರ ಆತ್ಮಕ್ಕೆ ಚಿರ ಶಾಂತಿಯನ್ನೀಲಯಲೆಂದು ದಯಾಮಯನನ್ನು ‹‹ಸಿದ್ಧಗಂಗಾ›› ಪ್ರಾರ್ಥಿಸುತ್ತದೆ.



## ಬಸವ ಪ್ರತಿಜ್ಞಾ

–ಟಿ. ನ್. ಮಹಾದೇವಯ್ಯ

ಗುರುಭಕ್ತಿಯ ಮಾಡಬಹುದಲ್ಲದೆ ಲಿಂಗಭಕ್ತಿಯ ಮಾಡಬಾರದು ; ಲಿಂಗ-ಭಕ್ತಿಯ ಮಾಡಬಹುದಲ್ಲದೆ ಜಂಗಮ ಭಕ್ತಿಯ ಮಾಡಬಾರದು. ಜಂಗಮ ಭಕ್ತಿಯ ಮಾಡಬಹುದಲ್ಲದೆ ಸಮಯ ಭಕ್ತಿಯ ಮಾಡಬಾರದು, ಸಮಯ ಭಕ್ತಿಯ ಮಾಡಬಹುದಲ್ಲದೆ ಸಮಯ ಸಂತೋಷವ ಮಾಡಬಾರದು, ಇವೆಲ್ಲವ ಮಾಡಬಹುದಲ್ಲದೆ ತನ್ನ ತಾನರಿಯಬಾರದು. ತನ್ನ ತಾನರಿದೆನೆಂಬ ಅಹಂಕಾರವು-ಳ್ಳಡೆ ನಿಮ್ಮವರಿಗೆ ದೂರ, ಎಲೆದೇವಾ ಅನ್ಯಕ್ಕೆ ಆಸೆ ಮಾಡಿದೆನಾದರೆ ನಿಮ್ಮಾಣೆ, ನಿಮ್ಮ ಪುರಾತನರಾಣೆ ಕೂಡಲಸಂಗಮದೇವ.

ಪರಮಾತ್ಮನನ್ನು ಆರಾಧಿಸುವ ಭಕ್ತನಿಗೆ ಮೊದ ಮೊದಲು ಸುಗುಣಾರಾಧನೆ-ಯಲ್ಲಿ ಬಹಳ ಇಷ್ಟ. ಅದರಲ್ಲಿ ಅವನು ಪರಮಾತ್ಮನಿಗೆ ಒಂದು ಆಕಾರವನ್ನು ಕಲ್ಪಿಸಿ-ಕೊಂಡು ಆ ದಿವ್ಯ ಆಕಾರದಲ್ಲಿ ತನ್ನ ಪ್ರೇಮವನ್ನು ಹರಿಬಿಟ್ಟು ಆನಂದದಲ್ಲಿ ಮಗ್ನ ನಾಗುವನು. ಅದನ್ನು ಭಗವಾನ್ ರಾಮಕೃಷ್ಣ ಪರಮಹಂಸರು ಸಮರ್ಥಿಸಿರುವರು. ಆದುದರಿಂದ ಆಸ್ತಿಕರ ಭಾವನೆಯಂತೆ ಹೃದಯವೆಂಬ ದೇವಾಲಯದಲ್ಲಿ ವಾಸಿಸುವ ದೇವನನ್ನು ಅಲ್ಲೇ ಆರಾಧಿಸಿದರೆ ಅಷ್ಟು ಪರಿಣಾಮವುಂಟಾಗಲಾರದು. ಮತ್ತು ದೇವನು ಹೃದಯದಲ್ಲಿರುವನೆಂಬುದನ್ನು ಸಮರ್ಪಿಸಿದಂತೆಯೂ ಆಗಲಾರದು. ಆದಕ್ಕಾಗಿಯೇ ವೀರಶೈವರ ಪರಮಾತ್ಮನ ರೂಪವಾದ ಇಷ್ಟಲಿಂಗವನ್ನು ಎದೆಯ ಮೇಲೆಧರಿಸಿ ದೇವರನ್ನು ಸಗುಣ ರೂಪಿನಿಂದ ಆರಾಧನೆ ಮಾಡಲು ಸಹ ಕಲ್ಪಿಸಿಕೊಂಡಿದ್ದಾರೆ. ಇದೇ ಸಾಕಾರ ಪೂಜೆಯ ವೀರಶೈವದ ಇಷ್ಟಲಿಂಗ ಪೂಜೆ.

ಇಷ್ಟಲಿಂಗ ಪೂಜೆಯ ರಹಸ್ಯವನ್ನು ತಿಳಿಸಿ ಅದನ್ನು ಕರಸ್ಥಲಕ್ಕೆ ತಂದುಕೊಟ್ಟವನು ಗುರು. ಅದರಲ್ಲೆ 'ಶಿವನ ಚಿತ್ಕಳೆ' ಎಂದರೆ ಒಂದು ದೈವೀ ಶಕ್ತಿಯ ಭಾವನೆಯನ್ನು ತುಂಬಿ ಆದೇ ಭಾವದಿಂದ ಸಾಧಕನು ಆರಾಧಿಸುವಂತೆ ಮಾಡುವನು ಗುರು. ಅದರಿಂದ ಮನುಷ್ಯನ ನಡೆನುಡಿಗಳನ್ನು ತಿದ್ದಿ ಭವರೋಗದಿಂದ ದಾಟಿಸಲು ಅವನು ಕಾರಣನು. ಅದಕ್ಕೆ ಭಗವಾನ್ ರಾಮಕೃಷ್ಣ ಪರಮಹಂಸರು ಹೀಗೆಂದಿರು-ವರು. ನಮ್ಮ ಮನಸ್ಸಿನ ಸಕಲ ಪ್ರಕಾರದ ಅಜ್ಞಾನ ಮಾಲಿನ್ಯಾದಿಗಳನ್ನು ದೂರ ಮಾಡುವವನೆ ನಿಜವಾದ ಗುರುವು. ಎಷ್ಟು ಶುದ್ಧ ಮತ್ತು ಉತ್ಕಟಭಾವದಿಂದ್ಯನಾವು ಗುರುಭಕ್ತಿ ಮಾಡ ಬಲ್ಲೆವೊ ಅಷ್ಟು ನಮಗೆ ಫಲವು ಹೆಚ್ಚು. ಗುರುವು ಪ್ರತ್ಯಕ್ಷ

ಅವತಾರದಂತೆ ಪೂಜಿಸರ್ಹನು. ನಮ್ಮ ಜೀವನದಲ್ಲಿ ಆಗುವ ವ್ಯತ್ಯಾಸಗಳಿಗೆಲ್ಲ ಗುರುವೇ ಕಾರಣನಾಗಿ ಲಿಂಗ ಪೂಜೆಯ ಅರ್ಥ ರೀತಿಗಳನ್ನು ತಿಳಿಸುವವನಾ ಇಷ್ಟಲಿಂಗಕ್ಕಿಂತ ಹಿರಿಯನಾಗಿರುವವನಾದುದರಿಂದ ಲಿಂಗಪೂಜೆಗಿಂತ ಗುರುಪೂಜೆ ಶ್ರೇಷ್ಠ.

ಜಗತ್ತಿನಲ್ಲಿ ಜಡ ಮತ್ತು ಚೇತನವೆಂದು ಎರಡು ವಿಧವಿರುತ್ತದೆ. ಸಾಧಕನು ಜಡದಲ್ಲಿ ಜೀವವನ್ನು ಆವಿರ್ಭವಿಸಿ ಅದನ್ನು ಚೈತನ್ಯವನ್ನಾಗಿ ಮಾಡುತ್ತಾನೆ. ಆದರೆ ಚೈತನ್ಯವು ಪ್ರತ್ಯಕ್ಷ ಜೀವವುಳ್ಳದ್ದಾಗಿರುತ್ತದೆ. ಇದನ್ನು ಎಂಬ ಗ್ರಂಥವು ಈ ರೀತಿ ವರ್ಣಿಸುತ್ತದೆ.

"ಅ ಜಂಗಮಂತಯಲ್ಲಿಂಗಂ ಮೃಚ್ಛಿಲಾದಿ ವಿನಿರ್ಮಿತಂ ।
ತದ್ವರ ಜಂಗಮಂ ಲಿಂಗಂ ಶಿವಯೋಗೀತಿ ವಿಶ್ರುತಂ ।
ಅಚರೇ ಮಂತ್ರ ಸಂಸ್ಕಾರಾಲ್ಲಿಂಗೇ ವಸತಿ ಶಂಕರಃ ।
ಸದಾಕಾಲಂ ವಸತ್ಯೇವ ಚರಲಿಂಗೇ ಮಹೇಶ್ವರಃ ॥

ಕಲ್ಲು ಮಣ್ಣು ಮೊದಲಾದ ಜಡ ಪದಾರ್ಥಗಳಿಂದ ನಿರ್ಮಿತವಾದ ಸ್ಥಾವರ ಲಿಂಗಕ್ಕಿಂತಲೂ, ಚರಿಸುವ ಲಿಂಗರೂಪಿಯಾದ ಜಂಗಮ ಮೂರ್ತಿಯು ಶ್ರೇಷ್ಠತರದ್ದಾಗಿರುತ್ತವೆ. ಏಕೆಂದರೆ ಸ್ಥಾವರಲಿಂಗ ಪೂಜಾ ಮಂತ್ರ ಸಂಸ್ಕಾರದಿಂದ ಶಿವನು ನೆಲಸುತ್ತಾನೆ. ಜಂಗಮನಲ್ಲಿ ಯಾವಗಲೂ ಜಡ ಚೈತನ್ಯಗಳೆಂದು ಎರಡುವಿಧ. ಜಡವನ್ನು ಸ್ಥಾವರ ರೂಪಿನಿಂದಲೂ, ಚೈತನ್ಯವನ್ನು ಮಾನವರೂಪಿನಿಂದಲೂ ಪೂಜಿಸುವನು. ಪರಮಾತ್ಮನನ್ನು ಲಿಂಗರೂಪಿಯೆಂದು ಸ್ಥಾವರದಲ್ಲಿ ತಂದಿಟ್ಟು ಸ್ಥಾವರ ಲಿಂಗವೆಂದೂ ಚರಿಸುವ ಮಾನವನಲ್ಲಿ ತಂದಿಟ್ಟು ಜಂಗಮವೆಂದೂ ಪೂಜಿಸುವರು. ಲೋಕ ಹಿತಕ್ಕಾಗಿ ಭಕ್ತ ಕೋಟಿಯ ಉದ್ಧಾರಕ್ಕಾಗಿ ಚರಿಸಿ, ನಿಸ್ವಾರ್ಥ ಬುದ್ಧಿಯಿಂದ ತಾನು ಅನುಭವಿಸುವ ಸಾಕ್ಷಾತ್ಕಾರದ ಸಚ್ಚಿದಾನಂದ ಸುಖವನ್ನು ಭಕ್ತಕೋಟಿಗೆ ಹಂಚುವ ಅವತಾರೀ ಜೀವಿಯೇ ಜಂಗಮನೆಂದು. ವೀರಶೈವರು ಆರಾಧಿಸುವುದರಿಂದ ಗುರುಲಿಂಗ ಇವರಿಬ್ಬರಿಗಿಂತಲೂ ಜಂಗಮ ಶ್ರೇಷ್ಠನು. ಅವೆರಡರ ಆರಾಧನೆಗಿಂತ ಜಂಗಮಾರಾಧನೆಯು ಅತ್ಯಂತ ಶ್ರೇಷ್ಠತರವಾದುದಾಗಿರುತ್ತದೆ.

ಪರಮಾತ್ಮನಿಗೆ ತನ್ನಲ್ಲಿರುವ ಪ್ರೇಮವು ಇವುಗಳ ಆರಾಧನೆಯಿಂದ ಹೆಚ್ಚುತ್ತ ಒಂದು ಶ್ರದ್ಧಾಭಕ್ತಿಯ ಸ್ಥಿತಿಗೆ ಬರುತ್ತದೆ. ಶ್ರದ್ಧೆಯುಳ್ಳ ಭಕ್ತನು ತನ್ನ ಸಾಧನೆಯಲ್ಲಿ ಮುಂದುವರಿದಂತೆಲ್ಲಾ ಭಕ್ತಿಯ ಪರಿಪಾಕವಾಗಿ ನಿಷ್ಠಾಭಕ್ತಿಯಲ್ಲಿ ಕೊನೆಗೊಳ್ಳುತ್ತದೆ. ಆಗ ಪರಮಾತ್ಮನು ಆರಾಧನೆಯಲ್ಲಿ ನಿಕಟ ಪ್ರೇಮವು ಉಗ್ರ ರೂಪದಲ್ಲಿರುತ್ತದೆ. ತನುವಿನ ಮೇಲಿನ ಮಮತೆಯಲ್ಲಿಯೂ ಪೂರ್ಣವಾಗಿ ಅಳಿದು ಹೋಗುತ್ತದೆ.



ಅಲ್ಲಿಂದ ಮುಂದೆ ಪರಮಾತ್ಮನೇ ಎಲ್ಲಿ ಕೆಲಸಗಳನ್ನೂ ಮಾಡುತ್ತಿರುವನೆಂದೂ ತಾನು ಕೇವಲ ಸೂತ್ರ ರೂಪನೆಂದೂ ತಿಳಿದು ಬರುತ್ತದೆ. ಇದನ್ನ ಶ್ರೀ ಅರವಿಂದರು ನಿನ್ನ ಕೃತಿಗಳೆಲ್ಲ ಆಸೆಯಿಂದ ಹುಟ್ಟುವುವು. ನಿನ್ನ ಶಕ್ತಿಗಳೆಲ್ಲ ಆಸೆಯವು. ಜೀವ ಮನಸ್ಸು ವೇಹ ಎಲ್ಲವೂ ಜೀವವುಳ್ಳ ಆನಂದಕಾರಕವಾದ ಆಯುಧಗಳಾಗಿ ಆಕೆಯ. ಆಟದ ಸೂತ್ರಗಳಿಂದ ಭೌತಿಕ ವಿಶ್ವದಲ್ಲಿ ಆಕೆಯ ರೂಪುಗೊಳ್ಳುವ ಅಂಗಾಂಗಳಾಗುತ್ತದೆ. ಈ ಸ್ಥಿತಿಯಲ್ಲಿ ಅವನ ಆಚಾರವು ಗುರುಪೂಜೆ, ಲಿಂಗಪೂಜೆ ಜಂಗಮಪೂಜೆಗಳನ್ನು ಮೀರಿ ದಾಟಿರುತ್ತದೆ. ಇದನ್ನೆ ಬಸವೇಶ್ವರನು ಸಮಯಪೂಜೆ ಎಂದು ಕರೆದಿರುವನು. ಭಗವಾನ್ ರಾಮಕೃಷ್ಣ ಪರಮಹಂಸರು ಅನುಭವಿಸಿ ನುಡಿದಿರುವ ಸಾಧನ ಘಟ್ಟದಲ್ಲಿ ಐದನೆಯದಾದ ಭಾವಸಮಾಧಿಯ ಆರಂಭಕ್ಕೆ ಹೋಲುತ್ತದೆ. ಅವರು ವೇದಾಂತದ ಸಪ್ತ ಭೂಮಿಕೆಗಳನ್ನು ವರ್ಣಿಸುವಾಗ ಹೀಗೆಂದಿರುವರು : ಚಿತ್ತವು ಹೃದಯಕ್ಕೆ ಬಂದರೆ ಶ್ರೇಷ್ಠ ವಿಚಾರಗಳರುಚಿಹತ್ತುವುದು. ಹೃದಯದಿಂದ ಕುತ್ತಿಗೆಗೇರಿದರೆ ಈಶ್ವರ ಕಥೋಪಕಥನಗಳೆ ವಿಶೇಷ ರುಚಿತರ ವೆನಿಸುವುವು. ಆಗ ಚಿತ್ತವು ಅನ್ಯ ವಿಷಯಗಳಲ್ಲಿ ಅಷ್ಟೊಂದು ತೊಡಗಲರಿಯದು. ಬಸವೇಶ್ವರನ ಈ ಅವಸ್ಥೆಯು - ಇಲ್ಲಿಯ ಅನುಭವವಾಗಿರುತ್ತದೆ. ಇದನ್ನು ವೀರಶೈವರು ಪ್ರಸಾದಿ ಸ್ಥಲವೆಂದು ಭಾವಿಸುವರು. ಲಿಂಗಪೂಜೆಯು ತನ್ನ ಪ್ರಾಣದ ಪ್ರೀತಿಗೆ ಸಮನಾಗಿ ಲಿಂಗಪ್ರಾಣ ಇವೆರಡರ ಮೇಲೂ ಒಂದೇ ವಿಧವಾದ ನಿಕಟ ಪ್ರೇಮವನ್ನಿಟ್ಟು ಆರಾಧಿಸುವುದು ಪ್ರಾಣಲಿಂಗಿಸ್ಥಲ. ಅಲ್ಲಿಂದ ಮುಂದೆ ದೇವ ಪತಿ ಜೀವನಸತಿಯೆಂಬುದರ ಅನುಭವವಾಗುತ್ತವೆ. ಇವೆರಡು ಸ್ಥಲದಲ್ಲಿ ಹೃದಯದಲ್ಲಿ ಪೂರ್ಣಪ್ರೇಮವುಕ್ಕಿ ಪರಮಾತ್ಮನಲ್ಲಿ - ವಿಶೇಷ ಆನಂದ ಹುಟ್ಟುವುದು. ಅದನ್ನು ಸ್ವಾಮಿ ವಿವೇಕಾನಂದರು ಹೀಗೆ ವರ್ಣಿಸಿರುವರು. ಮನುಷ್ಯನಿಗೆ ಈ ಶ್ರೇಷ್ಠ ಆನಂದವು ಬಂದಾಗ ಅವನು ಶ್ರೇಷ್ಠನಾಗುವನು. ಚಿರಶಾಂತಿ ಚಿರಸುಖಗಳು ಸಿಕ್ಕುವವು. ಈ ಶ್ರೇಷ್ಠವಾದ ದೈವೀ ಪ್ರೇಮವೂ ಹುಚ್ಚು. ನಮ್ಮಲ್ಲಿರುವ ಪ್ರಾಪಂಚಿಕ ರೋಗಗಳನ್ನು ವಾಸಿಗೊಳಿಸುವುದು. ಆಶೆಯೊಂದಿಗೆ ಸ್ವಾರ್ಥವೂ ಮಾಯವಾಗುವುದು. ಅವನು ದೇವನಬಳಿ ಸಾರುವನು. ಅವನಲ್ಲಿದ್ದ - ಕ್ಷುದ್ರ ಆಶೆಗಳೆಲ್ಲವನ್ನೂ ಕಿತ್ತೊಗೆದು ಬಿಡುವನು. ಇದನ್ನು ಅರವಿಂದ ಘೋಷರು ಹೀಗೆ ವರ್ಣಿಸಿರುವರು. ನೀನು ಆಕೆಯಿಂದಲೇ ಆಕೆಯ ಆಟಕ್ಕಾಗಿ ಸೃಷಿಸಲ್ಪಟ್ಟ ಒಂದು ವ್ಯಕ್ತಿ ಮತ್ತು ಶಕ್ತಿಯಿಂದು ತಿಳಿದುನೋಡಿ ಅನುಭವಿಸುವೆ ಮತ್ತು ಆಕೆಯಲ್ಲಿ ಇರುವಿಕೆಯ ಇರುವಿದೆಯಾಗಿ ಆಕೆಯ ಅರಿವಿಕೆಯ ಅರಿವಿಕೆಯೂ ಶಕ್ತಿಯ ಶಕಿಯೂ ಆನಂದದ ಆನಂದವೂ ಆಗಿ ಸುರಕ್ಷಿತವಾಗಿರುವೆ. ಬಸವೇಶ್ವರನು ಈ ಆನಂದವನ್ನು - ಸಮಯ ಸಂತೋಷವೆಂದು ಭಾವಿಸಿ ಅನುಭವಿಸಿ ನುಡಿದಿರುವನು.

ಇವೆಲ್ಲಕ್ಕಿಂತಲೂ ಮೀರಿದ ಪರಮಾವಧಿಯ ಅವಸ್ಥೆಯು ತನ್ನನ್ನು ತಾನು ತಿಳಿದುಕೊಳ್ಳುವುದು. ಪರಮಾತ್ಮನನ್ನು ಆರಾಧಿಸುತ್ತ, ಆರಾಧಿಸುತ್ತ ದೇವನಲ್ಲಿ ಬೆರೆಸಿ ನಾನು

ಬೇರೆ ದೇವ ಬೇರೆ ಎಂದು ತಿಳಿಯಲಾರದೆ ದೇಹವನ್ನು ಮರೆತು ಬಂದು ವಿಶ್ವಾನಂದದಲ್ಲಿ ತೇಲುತ್ತಿರುವನು. ಇದನ್ನು ಅನುಭವಿಸಿದ ಬಸವೇಶ್ವರರು ಅದನ್ನು ಹೀಗೆ ವರ್ಣಿಸಿರುತ್ತಾರೆ. ಹೊರಗಣ ಜಗತ್ತಿನ ರೂಪು ರಸಾದಿ ವಿಷಯಗಳ ಜ್ಞಾನ ಮತ್ತು ಅನುಭವ ದುಃಖ ಸುಖಾದಿ ಭಾವನೆಗಳು ಕಲ್ಪನೆ, ವಿಚಾರ' ಅನುಮಾನ, ಮುಂತಾದ ಎಲ್ಲ ಮಾನಸಿಕ ಕಾರ್ಯಗಳು ನಾನು ಹೀಗೆ ಮಾಡುವೆನು ಎಂಬ ಮುಂತಾದ ಚಿತ್ತ ವೃತ್ತಿಗಳೆಲ್ಲ ಅಡಗಿ ಶುದ್ಧಚಿತ್ತದಲ್ಲಿ ಲೀನವಾಗುವುವು. ವಿಶ್ವಾತ್ಮನಲ್ಲಿ ಬೆರೆಸಿ ಒಂದು ಪ್ರೇಮೋನ್ಮಾದದ ಆನಂದದಲ್ಲಿ ಅಡಗಿ ಹೋಗುವೆ. ಅದನ್ನು ವರ್ಣಿಸುವುದು ಸಾಧ್ಯವಿಲ್ಲ. ವಿಶಾಲ ಸಾಗರದಲ್ಲಿ ಒಂದು ಬಿಂದು ನೀರಿನಂತೆ, ಪ್ರಚಂಡ ಸೂರ್ಯ ಜ್ಯೋತಿಯಲ್ಲಿ ಮಿನುಗುವ ಒಂದು ಹಣತೆಯಂತೆ, ಜೀವನ ಜ್ಯೋತಿಯು ಪರಮನ ಪ್ರಚಂಡ ಜ್ಯೋತಿಯಲ್ಲಿ ಅಡಗಿ ಹೆಸರಿಲ್ಲವಾಗಿ ಬಿಡುವುದು. ಭಕ್ತನಿಗೆ ಒಂದು ಶಾಂತಿ. ಒಂದು ಆನಂದ ಇವೆರಡರ ಅನುಭವ ಮಾತ್ರವಾಗುತ್ತದೆ. ಮತ್ತಾವುದೂ ತಿಳಿಯದು. ಇದೇ ವಿಶ್ವದ ಗುರಿ. ಇದೇ ಪ್ರೇಮದ ಉನ್ಮಾದ ಸೂತ್ರ. ಎಲ್ಲ ಭಕ್ತಾದಿಗಳೂ ಇದನ್ನು ಅನುಭವಿಸಿದ ಮೇಲೆ ಅದನ್ನು ಬಿಟ್ಟು ಬಿಡಲು ಇಚ್ಛೆಯಿಲ್ಲದೆ ಅದರಲ್ಲೆ ಬೆರೆಸಲು ಪ್ರಯತ್ನಿಸುವರು. ಆ ಅವಸ್ಥೆಯಲ್ಲಿ ಅಹಂಕಾರವು ಎಲ್ಲಿರುವುದು ? ಇದನ್ನು ಬಸವೇಶ್ವರರು ಈ ವಚನದಲ್ಲಿ ವಿವರಿಸಿಸುತ್ತಾರೆ.

ಇಷ್ಟಲಿಂಗದ ಆರಾಧನೆಗಿಂತ ಗುರುವಿನ ಪೂಜೆಯು ಹೆಚ್ಚು. ಅದಕ್ಕಿಂತ ಜಂಗಮದ ಆರಾಧನೆ ಹಿರಿದು. ಅದಕ್ಕಿಂತ ವಿಶ್ವ ಶಕ್ತಿಯು. ಅದಕ್ಕಿಂತ ಆಚಾರವು ಶ್ರೇಷ್ಠ. ಅದಕ್ಕಿಂತ ಅದರ ಆನಂದವು ಹಿರಿದು. ಅದಕ್ಕಿಂತ ಅಂಗಾಂಗ ಸಾಮರಸ್ಯದ ಸುಖವು ಹೆಚ್ಚು - ಅಹಂಕಾರವಳಿದು ಆಸೆಗಳಡಗಿರುವೆನು ಪರಮಾತ್ಮನೇ ಎಂದು ಲಿಂಗಾಂಗ ಸಾಮರಸ್ಯದ ಸ್ಥಿತಿಯಲ್ಲಿ ನುಡಿದಿರುವನು.

---

" ಗಂಡನ ಮೇಲೆ ಸ್ನೇಹವಿಲ್ಲದ ಹೆಂಡತಿ
ಲಿಂಗದ ಮೇಲೆ ನಿಷ್ಠೆಯಿಲ್ಲದ ಭಕ್ತ
ಇದ್ದರೇನೋ ಶಿವ ಶಿವಾ ; ಹೋದರೇನೋ ಶಿವ ಶಿವಾ ?
ಕೂಡಲ ಸಂಗಮ ದೇವಯ್ಯಾ,
ಊಡದ ಆವಿಂಗೆ ಉಣ್ಣದ ಕರುವ ಬಿಟ್ಟಂತೆ ?
ಎಂದೋ ಸಂಸಾರದ ದಂದುಗ ಹಿಂಗುವುದು ?
ಎಂದೋ ಮನದಲ್ಲಿ ಪರಿಣಾಮವಹುದೆನಗೆಂದೋ-ಎಂದೋ?
ಕೂಡಲ ಸಂಗಮ ದೇವಾ,

—ಬಸವಣ್ಣನವರು.

ಶ್ರೀ ಸಿದ್ಧಲಿಂಗೇಶ್ವರಸ್ವಾಮಿ ಮುದ್ರಣಾಲಯ, ಶ್ರೀ ಸಿದ್ಧಗಂಗಾ ಕ್ಷೇತ್ರ.